

ಕಾಯಕವೇ ಕೈಲಾಸ

# ಸಿದ್ಧಗಂಗಾ



ಸಂಪುಟ : ೪೧ ಜನವರಿ ೨೦೦೬ ಸಂಚಿಕೆ ೧

## ಸಂಕ್ರಮಣ ಸಂಚಿಕೆ







ಶ್ರೀಮಠಕ್ಕೆ ಜನವರಿ ೭ ರಂದು ನೂತನ ಸಚಿವರು ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ ಪಡೆದರು. ಈ ಸಂದರ್ಭದಲ್ಲಿ ಸಚಿವ ಶ್ರೀ ಚೆಲುವರಾಯಸ್ವಾಮಿ, ಜೆಡಿ(ಎಸ್) ಪಕ್ಷದ ಕಾರ್ಯಾಧ್ಯಕ್ಷ ಶ್ರೀ ಹೆಚ್.ಡಿ. ಕುಮಾರಸ್ವಾಮಿ, ಸಚಿವ ಶ್ರೀ ಸಿ. ಚನ್ನಿಗಪ್ಪ, ಶ್ರೀ ಡಿ.ಎಲ್. ಜಗದೀಶ್, ಶಾಸಕ ಶ್ರೀ ಹೆಚ್. ನಿಂಗಪ್ಪ ಹಾಗೂ ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳವರು ಉಪಸ್ಥಿರಿದ್ದರು.







ಉಪ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ ಮತ್ತು ಸಚಿವ ಶ್ರೀ ಎಚ್.ಕೆ. ಪಾಟೀಲ್ ಅವರು ಇತ್ತೀಚಿಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು







ಮುಖಪುಟ

ಪರಮಪೂಜ್ಯ ಶ್ರೀ ಶ್ರೀಗಳವರಿಂದ
ನೂತನ ಸಚಿವರಿಗೆ ಆಶೀರ್ವಾದ


ಸಂಪಾದಕ
ಹೆಚ್.ವಿ. ವೀರಭದ್ರಯ್ಯ
☎ : 95816-2278052

ಸಹ ಸಂಪಾದಕ
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ
ಎಂ. ರೇಣುಕಾರಾಧ್ಯ
☎ : 95816-2283600

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
☎ : 95816-2282828
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪.
☎ : 95816-2282211

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್,
ನಂ.೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೨೩೬೦೪೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


ಸಂಪುಟ : ೪೧ ಜನವರಿ ೨೦೦೫ ಸಂಚಿಕೆ : ೧


## ಒಳಪುಟಗಳಲ್ಲಿ..........




| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೧೦೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೦.೦೦ |





## ಕೃತಜ್ಞತೆಯ ಮಹಾಪೂರ ! ....

''ಇದು ಭಾಗ್ಯ, ಬೇರಾವ ಸಂಸ್ಥೆಗಳಿಗೂ, ಮಠ-ಮಾನ್ಯಗಳಿಗೂ ಇಲ್ಲದ ಪರಮ ಸೌಭಾಗ್ಯ ಪಡೆದ ಕಿಂಚಿತ್ ಉಪಕಾರವನ್ನು ಪರ್ವತ ಸದೃಶವಾಗಿ ಪರಿಭಾವಿಸಿ ಸಂಸ್ಥೆಯೊಂದಿಗೆ ಸ್ಮರಣೀಯ ಸಂಬಂಧವನ್ನು ಬೆಳೆಸಿಕೊಂಡು ಬಂದಿರುವ ಹೃದಯಸ್ಪರ್ಶಿಯಾದ ಸುಸಂಸ್ಕೃತ ಭಾಗ್ಯವೆಂದೇ ಭಾವಿಸಿದ್ದೇನೆ'' – ಪರಮಪೂಜ್ಯ ಶ್ರೀ ಶ್ರೀಗಳವರು ಹೃದಯತುಂಬಿ ನುಡಿದರು ಅಂದು – ದಿನಾಂಕ ೧೯.೧೨.೨೦೦೪ರ ಭಾನುವಾರ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ೫೦ನೆಯ ಮಹಾಧಿವೇಶನದಲ್ಲಿ ಸಮಾವೇಶಗೊಂಡಿದ್ದ ಎಲ್ಲರ, ಎಲ್ಲ ಎಲ್ಲರ ಎದೆ ತುಂಬಿ ಭಾವಮುಗ್ಧತೆಯನ್ನನುಭವಿಸಿತು.

''ಪರಮಪೂಜ್ಯರಿಗೆ ಹಳೆಯ ವಿದ್ಯಾರ್ಥಿಗಳೆಂದರೆ ಎಲ್ಲಿಲ್ಲದ ಸಂತೋಷ. ನಿಮ್ಮೆಲ್ಲರ ಸದ್ಭಾವ, ಸನ್ನಡತೆ, ಶುಚಿ ಜೀವನವನ್ನು ಕಂಡಾಗ, ಕೇಳಿದಾಗ ಅವರಿಗಾಗುವ ಆನಂದಕ್ಕೆ ಎಣೆಯಿಲ್ಲ. ಮಕ್ಕಳಾಟದಲ್ಲಿ ಕೈಲಾಸ ಕಾಣುತ್ತಾರೆ, ದಾಸೋಹ ಮಣೆಹದಲ್ಲಿ ತನ್ಮಯರಾಗುತ್ತಾರೆ, ಅನಾರೋಗ್ಯವಿದ್ದರೂ ಸೇವೆಯಲ್ಲಿ ತೊಡಗಿರುತ್ತಾರೆ, ಪರಮಪೂಜ್ಯ ಪಾದರು ನಿಜಕ್ಕೂ ಒಂದು 'ಬೆರಗು' ಎಂಬಂತಾಗಿದೆ. ತೊಂಬತ್ತೇಳರಲ್ಲಿಯೂ ತುಂಬು ಉತ್ಸಾಹದ ಚಿರಹರೆಯದವರಂತೆ ಬೆಳಗಿದ್ದಾರೆ, ಶ್ರೀಗಳೊಂದೊಂದು ಸೇವಾ ಚಟುವಟಿಕೆಯೂ ನನಗೆ 'ಎಚ್ಚರ'ವನ್ನು ಬೋಧಿಸುತ್ತದೆ'' – ಎಂದರು ಕಿರಿಯ ಶ್ರೀಗಳಾದ ಪೂಜ್ಯ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು.

''ಶ್ರೀ ಅಟವೀಸ್ವಾಮಿಗಳ ಗದ್ದುಗೆಯ ಪೂಜೆ ಮಾಡುತ್ತಿದ್ದ ಸಂದರ್ಭದಲ್ಲಿ ತಟ್ಟೆಕಾಸಿನಲ್ಲಿ ಮೂರು ರೂಪಾಯಿ ಕದ್ದು ಶ್ರೀಗಳ ಕಣ್ಣಿಗೆ ಬಿದ್ದು ಅಪರಾಧಿಯಾದೆ. ಆ ತಪ್ಪಿಗಾಗಿ ಇಂದು ಮೂರು ಸಾವಿರ ರೂಗಳನ್ನು ಕಾಣಿಕೆಯಾಗಿ ಅರ್ಪಿಸುತ್ತಿದ್ದೇನೆ'' ಎಂದು ಒಬ್ಬರೆಂದರೆ ''ನನ್ನ ಶ್ರೀಮತಿ ತನ್ನ ಒಡವೆಗಳನ್ನು ಅಡವಿಟ್ಟಾದರೂ ಶ್ರೀಮಠಕ್ಕೆ ನೀವು ಸಲ್ಲಿಸಬೇಕೆಂದುಕೊಂಡಿರುವ ಕಾಣಿಕೆಯನ್ನು ಅರ್ಪಿಸಿ ಎಂದಳು'' ಎಂಬುದು ಮತ್ತೊಬ್ಬರ ಕೃತಜ್ಞತೆಯ ಮಾತು, ''ನೂರು ಜನ ಬಡವರಿಗೆ ಒಂದಿಷ್ಟು ಬ್ರೆಡ್ಡು, ಸ್ವಲ್ಪ ಸಾರು ಕೊಡುವುದನ್ನು ಬೃಹತ್ಪ್ರಮಾಣದಲ್ಲಿ ದೊಡ್ಡ ದೊಡ್ಡ ಅಕ್ಷರಗಳಲ್ಲಿ ನ್ಯೂಯಾರ್ಕ್ ಪತ್ರಿಕೆ ಪ್ರಚಾರಮಾಡುವುದನ್ನು ಕಂಡು, ಶ್ರೀಮಠ ಸಹಸ್ರ ಸಹಸ್ರ ಮಕ್ಕಳಿಗೆ ಆಶ್ರಯನೀಡಿ ಅನ್ನ, ಅಕ್ಷರ, ದಾಸೋಹ ಮಾಡುತ್ತಿರುವ ಶ್ರೀಮಠ ಪ್ರಚಾರದ ಅಭಾವದಿಂದ ಇರುವುದನ್ನು ಕಂಡು ನಾವೇನು ಮಾಡುತ್ತಿದ್ದೇವೆ, ಉಂಡ ಸಂಸ್ಥೆಗೆ ಕೊಟ್ಟಿದ್ದಾದರೂ ಏನು? ಎಂದು ಚಿಂತಿಸಬೇಕಾಗಿದೆ'' ಎಂದವರು ಮಗುದೊಬ್ಬರು.

ಕಣ್ಣು ತೇವಗೊಂಡ ಸಮಾರಂಭ, ಹೃದಯ ತುಂಬಿ ಬಂದ ಸನ್ನಿವೇಶ. ಮನುಷ್ಯನಲ್ಲಿ ಇನ್ನೂ ಕೃತಜ್ಞತೆ ಉಳಿದಿದೆ ಎಂಬುದನ್ನು ಸಾಬೀತುಗೊಳಿಸಿದ ನಿಮಿಷಗಳು. ಪ್ರಸಾದ ಪವಿತ್ರತೆ ರೂಪಿಸಿದ ಸುಸಂಸ್ಕೃತ ಮನಸ್ಸುಗಳು ಒಂದೆಡೆ ಕಲೆತು ಸ್ನೇಹ ವಿಶ್ವಾಸಗಳನ್ನು ಮೆಲುಕು ಹಾಕಿದ ಆನಂದದ ಸ್ಥಿತಿ ನೀಡಿದ ಶ್ರೀಗಳ ಸಂತೋಷ, ಪಡೆದ ಹಳೆಯ ವಿದ್ಯಾರ್ಥಿಗಳ ಸಂತೋಷ. ಸಂತೋಷದ ಸಂಭ್ರಮದಲ್ಲಿ ಕರ್ತವ್ಯವನ್ನು ಮರೆಯದೆ ಮಾಡಿದ ಸಂಕಲ್ಪಗಳು ಹಲವು. ಗುರುವಂದನ, ಅಮೃತ ಮಹೋತ್ಸವ, ಶತಮಾನೋತ್ಸವ, ಶ್ರೀ ಸಿದ್ಧಗಂಗಾ ಗುರುಕುಲ ಅಭಿವೃದ್ಧಿ ಟ್ರಸ್ಟ್ ಯೋಜನೆಗಳತ್ತ ಕ್ರಿಯಾಶೀಲರಾಗಿ ಮುನ್ನಡೆಯುವ ಪ್ರಾಮಾಣಿಕ ಬದ್ಧತೆ.

ಸಭೆಯಲ್ಲಿಯೇ ಉದ್ದೇಶಿತ ಯೋಜನೆಗಳಿಗಾಗಿ ಕಾಣಿಕೆ ಅರ್ಪಣ ಮಾಡಿದ ಶಿವಚಿತ್ತರು ನೂರಾರು ಮಂದಿ. ಎಲ್ಲಕ್ಕೂ ಪ್ರಾಮಾಣಿಕ ದಾಖಲೆ, ಮಾಸಪತ್ರಿಕೆಯ ಮುನ್ನಡೆಗೆ ಮತ್ತಷ್ಟು ಬೆಂಬಲ, ಸಹಕಾರ ಒದಗಿಬಂತು. ನಡೆದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಆ ಸಭೆಯಲ್ಲಿ ಸಂಕ್ಷಿಪ್ತ ಕರ್ನಾಟಕವಿತ್ತು; ಸರ್ವಧರ್ಮಗಳಿದ್ದವು, ''ಸಕಲಕೆಲ್ಲಕೆ ನೀನೆ ಅಕಳಂಕಗುರು''ವೆಂಬ ಭಕ್ತಿಭಾವ ಶ್ರೀಗಳವರ ಬಗ್ಗೆ ಎದ್ದು ಕಾಣುತ್ತಿತ್ತು, ಶ್ರೀ ಸಿದ್ಧಗಂಗಾಮಠ ಜಾತ್ಯಾತೀತ ಮೌಲ್ಯವನ್ನು ಮುಕ್ತವಾಗಿ ಒಪ್ಪಿಕೊಂಡಿರುವ ಆದರ್ಶ ಸಂಸ್ಥೆಯೆಂಬುದಕ್ಕೆ ನಿದರ್ಶನವಾದ ೫೦ನೆಯ ಮಹಾಧಿವೇಶನ ಯಶಸ್ವಿಯಾಯಿತು.

ಎಲ್ಲರಿಗೂ ಸಂಕ್ರಾಂತಿಯ ಶುಭಾಶಯಗಳು

– ಸಂಪಾದಕ









## ಮಠಗಳು – ಸ್ವಾಮಿಗಳು

*ಸಾಧು ಸಂತರ ಬಗ್ಗೆ ಸನ್ಯಾಸಿಗಳ ಬಗ್ಗೆ, ಮಠಾಧಿಪತಿಗಳ ಬಗ್ಗೆ ತುಂಬು ಗೌರವ ಭಕ್ತಿಗಳಿದ್ದ ದಿನಗಳಿದ್ದವು. ಆದರೆ ಇಂದು ಆ ಭಾವನೆ ದೂರವಾಗುತ್ತಿದೆ. ಯಾವ ಮಠಾಧೀಶರ ವಿಚಾರದಲ್ಲಿಯಾದರೂ ಮಾತಾಡುವುದಕ್ಕೆ ಜನ ಹೆದರುತ್ತಿದ್ದರು. ಈಗ ಹಾಗಿಲ್ಲ. ಎಲ್ಲರನ್ನೂ, ಎಲ್ಲವನ್ನೂ ಪರೀಕ್ಷಿಸಿ ನೋಡುವ, ಕಣ್ಣಲ್ಲಿ ಕಣ್ಣಿಟ್ಟು ಕಾಣುವ ದಿನಮಾನಗಳಲ್ಲಿದ್ದೇವೆ. ಸುದ್ದಿ ಮಾಧ್ಯಮಗಳಲ್ಲಿ ನಿರ್ಭೀತವಾಗಿ ಮಠಗಳ, ಸ್ವಾಮಿಗಳ ಬಗ್ಗೆ ಏರು ಬೆಳಕಿನಲ್ಲಿ ಸುದ್ದಿಗಳು ಪ್ರಚಾರವಾಗುತ್ತಿವೆ. ಒಮ್ಮೊಮ್ಮೆ ಪ್ರಚಾರಗಳ ಸ್ಪರ್ಧೆಯೇ ನಡೆಯುವುದುಂಟು. ರಂಜಿತ, ರೋಚಕ ರೀತಿಯಲ್ಲಿ ಅವು ಜನರ ಬಾಯಿಗೆ ರುಚಿನೀಡುವಂತಿರುತ್ತವೆ. ಇರುವೆ ಗಾತ್ರದ ಪ್ರಮಾದವನ್ನೂ ಆನೆ ಗಾತ್ರಕ್ಕೇರಿಸಿ ವರದಿಸುವ ಸುದ್ದಿಮಾಧ್ಯಮಗಳು ಸಮಾಜದ ಆರೋಗ್ಯ ಕಾಪಾಡುವಲ್ಲಿ ಯೋಚಿಸುವಂತೆ ಕಾಣುತ್ತಿಲ್ಲ. ಇದಕ್ಕೆಲ್ಲ ಕಾರಣ ಸ್ವಾಮಿಗಳೆನಿಸಿಕೊಂಡವರಲ್ಲಿ ಕಾಣಬರುವ ನ್ಯೂನತೆಗಳು. ಸ್ವಾಮಿಗಳಾಗುವುದು ತುಂಬ ಕಷ್ಟ. ಹಲವು ಹನ್ನೊಂದು ಸೆಳೆತಗಳ ಸುಳಿಯಿಂದ ದೂರವಿರುವುದು ಸಾಮಾನ್ಯವೇನಲ್ಲ. ಅದಕ್ಕೆ ಕಠಿಣನಿಷ್ಠೆ, ಎಚ್ಚರದ ಸಂಯಮ, ಲೋಕಭಯವಿರಬೇಕು. ಅದರಲ್ಲಿಯೂ ಕಾಂಚನ ಕಾಮಿನಿಯರಿಂದ ದೂರವಿರುವುದೆಂದರೆ ಅಸಿಧಾರಾವ್ರತವಿದ್ದಂತೆ. ಅದೊಂದು ಕರಗಸ, ಹೋಗುತ್ತ ಕೊಯ್ಯುತ್ತದೆ; ಬರುತ್ತ ಕೊಯ್ಯುತ್ತದೆ. ಲೋಕ ಸಂಗ್ರಹ ಕಾರ್ಯದಲ್ಲಿರುವಾಗ ಆತ್ಮ ಸಂಗ್ರಹದಿಂದ ವಿಮುಖವಾಗಬಾರದು. ಚಾರಿತ್ರ್ಯ ಶುದ್ಧಿಯ ತಪಸ್ಸು ಬಹು ಕಠಿಣ, 'ಸಾವಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ'. ಸ್ವಾಮಿ ಪದಕ್ಕೆ ಒಪ್ಪಬೇಕಾದರೆ ಕ್ಷಣ ಕ್ಷಣಾರ್ಧದಲ್ಲಿಯೂ ಎಚ್ಚರ ತಪ್ಪಬಾರದು. ನಿರ್ಲಿಪ್ತತೆಯನ್ನು ಸಾಧಿಸುವುದು ಧ್ಯೇಯವಾಗಿರಬೇಕು''. ಉಂಡರೆ ಭೂತನೆಂಬರು ಉಣದಿರ್ದಡೆ ಚಕೋರಿ ಎಂಬರು'' – ಲೋಕದಬಾಯಿ ತುಂಬಾ ಶಕ್ತಿಯುತವಾದುದು. ಆದರಿಂದ ಪಾರಾಗುವುದು ಅತಿಕಷ್ಟ. ಪಾರಾಗದವರಿಲ್ಲವೆಂದಲ್ಲ. ಪಾರಗುವ ದಾರಿ ಮಧ್ಯೆ ಚಾರಿತ್ರ್ಯವನ್ನು ಕಳೆದುಕೊಳ್ಳುವ ವಿಷಗಳಿಗೆಗಳು ಹೆಡೆಯೆತ್ತಿ ಹೊಡೆ ಮರಳಿ ಬರುತ್ತಲೇ ಇರುತ್ತವೆ. ಅವುಗಳನ್ನು ದಾಟುವಲ್ಲಿಯೇ, ಗೆಲ್ಲುವಲ್ಲಿಯೇ ಸ್ವಾಮಿತ್ವದ ಪಾವಿತ್ರ್ಯತೆ ಇರುವುದು. ದೇಹಭಾವಕಕೆ ಸಾವಿರ ಆಕರ್ಷಣೆಗಳು. ಅವುಗಳನ್ನೆಲ್ಲ ಮೆಟ್ಟಿನಿಲ್ಲಬೇಕಾದರೆ ಕಾಯಕ ದಾಸೋಹಗಳೆಂಬ ಶಿವಪಥದಲ್ಲಿ ನಡೆಯಬೇಕು.*

*ಇತ್ತೀಚಿನ ದಿನಗಳಲ್ಲಿ ಚಿತ್ತ ಸಮಾಧಾನವನ್ನು ಕಾಪಾಡುವಂಥ ಲೋಕವ್ಯವಹಾರಗಳು ಕಡಿಮೆಯಾಗುತ್ತಿವೆ. ದೂರದರ್ಶನದಲ್ಲಿ ಬಿತ್ತರವಾಗುವ ಸುದ್ದಿ ಚಿತ್ರಗಳಂತೂ ಬೆಳೆವ ಎಳೆ ಮಕ್ಕಳ ಮಾನಸಿಕ ಆರೋಗ್ಯವನ್ನು ಹದಗೆಡಿಸುತ್ತಿರುವುದು ದುರ್ದೈವವೆನ್ನದೆ ವಿಧಿಯಿಲ್ಲ. ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ಸುದ್ದಿಗಳು ಬೇಸರ ತರಿಸುತ್ತವೆ. ಒಬ್ಬರು ಮಾಡಿದ ತಪ್ಪಿಗಾಗಿ ಸಮುದಾಯವನ್ನೇ ಬೆರಳು ಮಾಡಿತೋರಿಸುವ ಪ್ರವೃತ್ತಿ ಪ್ರಬಲವಾಗುತ್ತಿವೆ. ಆದರಲ್ಲಿ ಕಲಿತವರು, ಕಲಿಯದವರು, ಅನುಭವಿಗಳು, ವ್ಯವಹಾರಬಲ್ಲವರು, ಹಳ್ಳಿಗರು, ಪಟ್ಟಣಿಗರು, ಹೆಣ್ಣು-ಗಂಡು ಎಂಬ ಭೇದವಿಲ್ಲ. ಎಲ್ಲರೂ ಬೆರಳು ಮಾಡುವವರೇ. ಬಾಯಿಯಾಡಿಸುವವರೇ. ಕಾವಿಯನ್ನು ಧರಿಸಿದ್ದೇ ತಪ್ಪಾಯಿತೇನೋ, ಸ್ವಾಮಿಗಳಾದದ್ದೇ ಅಪರಾಧವೇನೋ ಎನ್ನುವಂತಹ ಮಾನಸಿಕ ತುಮುಲಕ್ಕೆ ಅವಕಾಶ ಮಾಡಿಕೊಡುವಂತಾಗಿರುವುದು 'ಕಾಲದ ಗುಣ'ವೆನ್ನಬೇಕಾದೀತೇನೋ. ಚಾರಿತ್ರ್ಯಶುದ್ಧಿ ಸಾಧಿಸಿರುವ ಮಹಾನುಭಾವರಿಗೆ ಇಂತಹುದರಿಂದ ಏನೂ ಆಗಲಾರದು. ಆದರೆ, ಲೋಕದೃಷ್ಟಿಗಾದರೂ ಈ ಮಾರ್ಗ ಯೋಗ್ಯವೆನಿಸುತ್ತದೆಯೇ?*

*ಯಾವುದೇ ಸ್ವಾಮಿಯ ಅಥವಾ ಮಠದ ಘನತೆಯನ್ನು, ಹಿರಿಮೆಯನ್ನು ಪಾವಿತ್ರ್ಯತೆಯನ್ನು ತೀರ್ಮಾನಿಸುವುದು ವರ್ತಮಾನ ಕಾಲವಲ್ಲ, ಅದು ಭವಿಷ್ಯತ್‌ಕಾಲವೆಂಬುದನ್ನು ಮರೆಯಬಾರದು. ಲೋಕ ಮತ್ತು ಕಾಲಗಳು ಅತ್ಯುನ್ನತ ಹಾಗೂ ನಿಷ್ಪಾಕ್ಷಿಕವಾದ ನ್ಯಾಯಾಲಯಗಳು.*

*

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಮೂರೊಂದು ಕೂಡಿದ ಬಟ್ಟೆಯಲ್ಲಿ*
*ಮಾರಿ ಮನೆಯ ಮಾಡಿಕೊಂಡಿಪ್ಪುದ ಕಂಡೆನಯ್ಯಾ*
*ಮಾರಿಯ ಮುಖದಲ್ಲಿ ಮರ್ಕಟಹುಟ್ಟಿ ಮಾರುತನಕೂಡಿ*
*ಈರೇಳು ಲೋಕವನುಂಗಿತ್ತು ನೋಡಾ*
*ಈರೇಳು ಲೋಕವ ನುಂಗಿದ ಕಪಿ ಮೇರು ಗಿರಿಯನೇರಿ*
*ದಾರಿಗೊಂಡು ಹೋಗುವರ ನೇಡಿಸಿ ಕಾಡುತಿರ್ದುದು ನೋಡಾ*
*ಕೋಡಗನಮುಖವ ನೋಡಿಹೆನೆಂದು ಹೋದರೆ*
*ಅದು ಕಾಲಸರ್ಪವಾಗಿ ನುಂಗಿ ಹೇಳಿಗೆಯೊಂದಕೊಳೆ ಅಡಗಿತ್ತು ನೋಡಾ*
*ಹೇಳಿಗೆ ಮುರಿಯಿತ್ತು. ಕಾಲಸರ್ಪ ಸತ್ತಿತ್ತು.*
*ಮೇರು ಗಿರಿಯನೇರಿದ ಮರ್ಕಟ ನಾರಿಯ ಶಿರವಮೆಟ್ಟಿ*
*ಮಾರಾರಿಯ ಬೆರಸಿದ್ದ ಕಂಡು ಬೆರಗಾದೆನು ಕಾಣಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ.*

ಸೃಷ್ಟಿ, ಸ್ಥಿತಿ, ಸಂಹಾರದೊಡನಿರು ಪ್ರಪಂಚವೆಂಬ ಮಾರ್ಗದಲ್ಲಿ, ಅವಿದ್ಯಾಶಕ್ತಿ ಆಶ್ರಯವ ಮಾಡಿಕೊಂಡಿರುವುದು ಜ್ಞಾನನೇತ್ರದಿಂದ ನಿದರ್ಶನವ ಮಾಡಿದ ಶಿವಶರಣನು ಆ ಅವಿದ್ಯಾಶಕ್ತಿಯ ದುರ್ವಿವೇಕವೆಂಬ ಮುಖದಲ್ಲಿ ಚಂಚಲರೂಪವಾದ ಮನವೆಂಬ ಮರ್ಕಟನು ಉದಯವಾಗಿ, ದಶವಾಯುಗಳ ಪ್ರಪಂಚದೊಡನೆ ಕೂಡಿ, ಚತುರ್ದಶೇಂದ್ರಿಯಗಳ ವ್ಯಾಪಾರವನೊಳಕೊಂಡಿದ್ದು, ಅವುಗಳನ್ನು ಅರಗ್ರಹಿಸಿದ ಮನವೆಂಬ ಕಪಿಯು ಅಹಂಕಾರಭಾವದಿಂದ ದೇಹಭಾವವನ್ನು ಏರಿ ಅಜ್ಞಾನ ಮಾರ್ಗದಿಂದ, ಆಚರಿಸುವ ಆತ್ಮರುಗಳ, ಪ್ರಪಂಚನಿಂದೆ ಹಾಸ್ಯ ಮಾಡಿ ಪೀಡಿಸುತ್ತಿದೆ. ಆ ಮನವೆಂಬ ಕಪಿಯ ದುರ್ವಿವೇಕವೆಂಬ ಮುಖವನ್ನು ಭಿನ್ನಜ್ಞಾನದಿಂದ ನೋಡಲಿಚ್ಛಿಸಿದರೆ, ಆ ಕಪಿಯು ಕಾಲನೆಂಬ ಸರ್ಪನಾಗಿ ಮುತ್ತಿ, ಜನ್ಮಕ್ಕೆ ಕಾರಣವಾದ ದೇಹಭಾವವೆಂಬ ಪೆಟ್ಟಿಗೆಯಲ್ಲಿ ಗೌಪ್ಯವಾಗಿದೆ. ಆ ಜೀವನಿಗೆ ಕಾಲಾನು ಕಾಲಕ್ಕೆ ಸುಜ್ಞಾನೋದಯವಾಗಿ, ಗುರು ಕಾರುಣ್ಯದಿಂದ ಲಿಂಗಾಂಗ ಸಂಬಂಧಿಯಾಗಿ, ಆರುಸ್ಥಲವಿಡಿದು ಆಚರಿಸಿದಲ್ಲಿ ಅಂಗತತ್ವಗಳೆಲ್ಲಾ ಲಿಂಗ ತತ್ವಗಳಾಗಿ, ದೇಹಭಾವ ಅಳಿದು, ಕಾಲಬಾಧೆ ಸತ್ತು, ಮೂಲ ಅಹಂಕಾರದೊಡನೆ ಕೂಡಿದ ಕಪಿಯು, ಜ್ಞಾನ ಶಕ್ತಿಯೆಂಬ ಶಿರಸ್ಸನ್ನೇರಿ, ಪರಶಿವಲಿಂಗದಲ್ಲಿ ಏಕಾರ್ಥವಾದ ಭೇದವ, ಜ್ಞಾನನೇತ್ರದಿಂದ ನಿದರ್ಶನವಾದ ಶಿವಶರಣನತ್ಯಾಶ್ಚರ್ಯವೆನ್ನುತ್ತಿದೆ ವಚನದೀಪ.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ಪ್ರಣವ ಸ್ವರೂಪನೆ ಪ್ರಣವ ಪಂಚಾಕ್ಷರಿಯೆ
ಪ್ರಣವ ಪಾವನ ಜ್ಯೋತಿ ಮಂಗಳವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

"ಆರಿಗಾರೂ ಇಲ್ಲ ಕೆಟ್ಟವಗೆ ಕೆಳೆಯಿಲ್ಲ
ದಾರಿ ತೋರಿದ ಬಸವನುಡಿಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಘನಲಿಂಗ ಕರದಲ್ಲಿ ಇರುವಾಗ ಭಯವೇಕೆ
ಮನದೊಳಗೆ ಹೊಳೆದಿರುವ ಬೆಳಕಿರಲು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ಶುದ್ಧ ಗುರುವೆ ಜ್ಞಾನ ಶುದ್ಧ ಪ್ರಭುವೆ
ಸೇವಾ ಶುದ್ಧವಾದ ಸಾಗರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ನಿರೂಪವೆ ಸಕಲ ಆಗಮವೆನಗೆ
ನಿನ್ನ ಆದೇಶವೆ ಶ್ರೀವೇದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುಲಿಂಗ ಜಂಗಮ ಸೇವೆಯ ಬಿಡಬೇಡ
ಅರಿವು ಆಚಾರಗಳನರಿಯೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸತ್ಯ ಸೂರ್‍ಯೋತ್ತಮನೆ ನಿತ್ಯ ನಿರ್ಮಳ ಮನನೆ
ಪೃಥ್ವಿ ಸಾಗರಸಮ ಶ್ರೀ ಶಾಂತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಯಲಿ ಬೇಡುವೆನು ನೀಡೆನಗೆ ಶಕ್ತಿಯನು
ಕಾವ್ಯದೇಗುಲ ರಚಿಪ ಕಲೆಯನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಯಾತ್ರೆಯಮಾಳ್ಪೆ ಭಕುತಿ ಗೀತೆಯಪೇಳ್ವೆ
ದೇವ ಶಿಲ್ಪಿಯೆ ನಡೆಸುನೀ ಮುಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವಗಂಗಾ ಗುರುವೆ ದೇವಗಂಗಾ ವಿಭುವೆ
ಸೇವಾ ಗಂಗಾ ತುಂಗ ಶಿವರೂಪ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ವಿಭೂತಿ

– ದೇಜಗೌ
ವಿಶ್ರಾಂತ ಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

**ಬ**ಸವಣ್ಣನವರು ವಿಶ್ವದ ವಿಭೂತಿ ಪುರುಷರಾದ ಬುದ್ಧ ಯೇಸು ಮೊದಲಾದವರ ಸಾಲಿನಲ್ಲಿ ದೇದೀಪ್ಯಮಾನವಾಗಿ ರಾರಾಜಿಸಬಲ್ಲ ಸಂಪನ್ನತೆಯುಳ್ಳ ಮಹಾಮಹಿಮರು. ಆದರೆ ಬುದ್ಧ ಯೇಸುವಿನಂತೆ ಆನಂದ, ಉಪಾಲಿ, ಪಾಲ್, ಲ್ಯೂಕ್, ಜಾನ್‌ರಂಥ ಶಿಷ್ಯರನ್ನು ಪಡೆಯದ ಕಾರಣಕ್ಕಾಗಿ ಕೇವಲ ಕರ್ಣಾಟಕಕ್ಕೆ ಸೀಮಿತವಾದ ಕೀರ್ತಿಯುಳ್ಳ ದುರ್ದೈವೀ ಮಹಾ ಮಾನವರು ಅವರು. ಒಬ್ಬ ಮಗಧ ಸಾರ್ವಭೌಮನೋ ರೋಮನ್ ಚಕ್ರಾಧಿಪತಿಯೋ ಅವರಿಗೂ ದೊರೆತಿದ್ದರೆ ಅವರ ಕೀರ್ತಿ ಜನ್ಮ ರಾಷ್ಟ್ರದಿಂದಾಚೆ ಸಾಗರಾಂತರ ರಾಷ್ಟ್ರಗಳಿಗೂ ಪ್ರವೇಶಿಸುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ. ಸರ್ವಸಮಾನತೆಯ ಆಧಾರದ ಮೇಲೆ ವರ್ಗ ವರ್ಣ ಜಾತಿರಹಿತ ಸಮಾಜ ನಿರ್ಮಾಣಕ್ಕಾಗಿ ಸತತ ಹೋರಾಟ ನಡೆಸಿದ, ತಮ್ಮ ಜೀವಿತಕಾಲದಲ್ಲಿಯೇ ರಾಜಮಹಾರಾಜರಿಗೆ ಸೊಪ್ಪು ಹಾಕದ ಅವರ ಗುರುತ್ವವನ್ನು ಯಾವ ದೊರೆ ತಾನೇ ಮಾನ್ಯ ಮಾಡಿಯಾನು? ಸಿಂಹಾಸನದ ಬುಡವನ್ನಲುಗಿಸಿದ ಅವರ ತತ್ವಗಳನ್ನು ಯಾವ ರಾಜ ತಾನೇ ಪ್ರಚಾರ ಮಾಡಿಯಾನು? ಯೂರೋಪುಖಂಡ ಮಧ್ಯಕಾಲೀನ ಅಂಧಕಾರ ಯುಗದಲ್ಲಿ ತೊಳಲಾಡುತ್ತಿದ್ದಾಗಲೇ, ಮಾರ್ಟಿನ್ ಲೂಥರ್‌ನಂಥ ಧೀರ ಸಮಾಜಸುಧಾರಕನ ಆಗಮನದ ಬಗ್ಗೆ ಕನಸು ಕಾಣುವುದಕ್ಕೆ ಬಹುಕಾಲದ ಹಿಂದೆಯೇ ಈ ಮಹಾಕ್ರಾಂತಿಕಾರರು ಕರ್ನಾಟಕದಲ್ಲಿ ಮಿಂಚಿನಂತೆ ಸುಳಿದು, ಬಿರುಗಾಳಿಯಂತೆ ಬೀಸಿ, ಕಣ್ಮರೆಯಾಗುತ್ತಾರೆ. ನಾನಕ್, ಕಬೀರ್, ಲಿಂಕನ್, ಮಾರ್ಕ್ಸ್, ಲೆನಿನ್, ಗಾಂಧಿ, ಅಂಬೇಡ್ಕರ್‌ರಂಥ ಸಂತರ, ಮಹಾತ್ಮರ, ಪತಿತೋದ್ಧಾರಕರ ಜನ್ಮಾವತರಣಕ್ಕೆ ಮುನ್ಸೂಚಿಯಂತಿದೆ ಅವರ ಜೀವನ ಯಾತ್ರೆ, ಸ್ವಾತಂತ್ರ್ಯ ಸಮಾನತೆ ಮತ್ತು ಭ್ರಾತೃತ್ವಗಳ ಆಧಾರದ ಮೇಲೆ ಎಂಥ ನೂತನ ಸಮಾಜ ನಿರ್ಮಾಣವಾಗಬೇಕೆಂದು ಮನುಕುಲ ಕನಸು ಕಂಡಿತೋ ಅಂಥ ಸಮಾಜ ನಿರ್ಮಾಣ ಕಾರ್ಯದಲ್ಲಿ ಎಂಟುನೂರು ವರ್ಷಗಳಿಗೆ ಮೊದಲೆ ಬಸವಣ್ಣನವರು ತೊಡಗಿದ್ದುದು ಅದ್ಭುತದ ಸಂಗತಿಯಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ಮಾವೋ ಸಮಗ್ರ ಕ್ರಾಂತಿಯ ಹೆಸರಿನಲ್ಲಿ ಕೇವಲ ಪಾರ್ಶ್ವಿಕ ಕ್ರಾಂತಿಯನ್ನು ಕಾರ್ಯಗತಗೊಳಿಸಿದ; ಜಯಪ್ರಕಾಶ ನಾರಾಯಣರ ಸಮಗ್ರ ಕ್ರಾಂತಿಯ ಕಲ್ಪನೆ ಇನ್ನೂ ವಾಸ್ತವ ರೂಪವನ್ನು ತಾಳಿ ನೆಲಕ್ಕಿಳಿದಿಲ್ಲ; ಎಂಟುನೂರು ವರ್ಷಗಳ ಹಿಂದೆಯೇ ಬಸವಣ್ಣನವರು ಅದರ ರೂಹಾರಿಯಾಗಿ ಅದನ್ನು ಕಾರ್ಯಗತಗೊಳಿಸುವಲ್ಲಿ ಯಶಸ್ವಿಯಾಗಿದ್ದರೆನ್ನುವುದಂತು ರೋಮಾಂಚಕಾರಿಯಾದ ಘಟನೆಯಾಗಿದೆ; ಮನುಕುಲಕ್ಕೆ ಹೆಮ್ಮೆ ಗೌರವಗಳನ್ನು ತರುವ ಭವ್ಯೋಜ್ವಲ ಸಾಧನೆಯಾಗಿದೆ.

ಧರ್ಮಕ್ಕೆ ಗ್ಲಾನಿಯೊದಗಿದಾಗ ಭಗವಂತ ಭೂಲೋಕದಲ್ಲಿ ಅವತರಿಸಿ ಅಸುರೀಶಕ್ತಿಗಳನ್ನು ನಿರ್ನಾಮ ಮಾಡುತ್ತಾನೆನ್ನುವುದು ಆಸ್ತಿಕರ ನಂಬಿಕೆ. ಕಾರಣಪುರುಷರ ಅಥವಾ ಐತಿಹಾಸಿಕ ವ್ಯಕ್ತಿಗಳ ಜನ್ಮಧಾರಣೆ ಪರಿಸರದ ಒತ್ತಡದಿಂದ ನಡೆಯುವ ನೈಸರ್ಗಿಕ ಘಟನೆಯೆಂದು ಇತಿಹಾಸಕಾರ ಗುರುತಿಸಬಹುದು. *'ಜನಮನದ ಶಕ್ತಿ ಮೇಣವರಭೀಪ್ಸೆಯೆ ಮಹಾತ್ಮರಂ ನಮ್ಮೆಳೆಗೆ ತಪ್ಪದೆಳೆತರ್ಪುದು ಕಣಾ'* ಎನ್ನುವುದು ಕವಿಯ ಕಾಣ್ಕೆ. ಭೂಗರ್ಭದಲ್ಲಿ ಪ್ರವಹಿಸುತ್ತಿರುವ ಜನ ಎಂದಾದರೊಮ್ಮೆ, ಯಾವುದೋ ಕೇಂದ್ರದಲ್ಲಿ ಬುಗ್ಗೆಯಾಗಿ ಚಿಮ್ಮುತ್ತದೆ; ತಿರೆಯ ಮೈಮೇಲೆ ಬಿದ್ದ ಮಳೆ ಒಂದೆಡೆಗೆ ಉರುಳಿರುಳಿ ನದಿಯಾಗಿ ಹರಿಯುತ್ತದೆ; ಅಂತೆಯೇ ಸರ್ವವ್ಯಾಪಿಯಾದ ದೈವೀಶಕ್ತಿ ವಿಶೇಷ ಪರಿಸ್ಥಿತಿಯಿಂದಾಗಿ ಒಂದೆಡೆ ಸಾಂದ್ರೀಕರಣಗೊಂಡು ಹೊರಹೊಮ್ಮಿದಾಗ ವಿಭೂತಿಯ ಅವಿರ್ಭಾವವಾಯಿತೆಂದು ಹೇಳುವಲ್ಲಿ ಪ್ರಮಾದ ಸಂಭವಿಸುವುದಿಲ್ಲ. ಉತ್ತಮ ಕುಲದ ಹೆಸರಿನಲ್ಲಿ ಅನ್ಯಾಯ ಪರಂಪರೆ ಘೂರ್ಣಿಸುತ್ತಿರುವಾಗ ಶ್ರೀಸಾಮಾನ್ಯನ ಉದ್ಧಾರಕ್ಕಾಗಿ ಬುದ್ಧನ ಅವತಾರ ಅನಿವಾರ್ಯವಾಗುತ್ತದೆ; ಪುರೋಹಿತ ಪಾಶವೀ ಕೃತ್ಯಗಳಿಂದಾಗಿ ಸಮಾಜ ಹೊಲಬುಗೆಟ್ಟು ತತ್ತರಿಸುತ್ತಿದ್ದಾಗ, ದೇವರ ಹೆಸರಿನಲ್ಲಿ ಹಿಂಸೆ ಅತ್ಯಾಚಾರಗಳು ನಡೆಯುತ್ತಿದ್ದಾಗ, ಜನ ಅಜ್ಞಾನಾಂಧಕಾರದಲ್ಲಿ ತೊಳಲುತ್ತ, ಮೌಢ್ಯ ಪಂಕದಲ್ಲಿ ಮುಳುಗಿರುತ್ತ, ನಾರಕೀಯ ಜೀವನದಿಂದ ಕಂಗೆಟ್ಟಿದ್ದಾಗ

ಯೇಸುವಿನಂಥ ಮಹಾತ್ಮನ ಅವಿರ್ಭಾವ ಅತ್ಯವಶ್ಯವಾಗುತ್ತದೆ. ನಾನಾ ಜಾತಿ ಕುಲ ಕೋಮುಗಳ ಸಂಘರ್ಷದಿಂದ, ನೂರಾರು ಕ್ಷುದ್ರದೇವತೆಗಳ ಉಪಾಸನೆಯಿಂದ, ಹಲವಾರು ಅರ್ಥಹೀನ ವಾಮಾಚಾರ ಸಂಪ್ರದಾಯಗಳ ಕಲಸುಮೇಲೋಗರದಿಂದ, ಬರ್ಬರ ಸಹಜವಾದ ಅಶ್ಲೀಲ ಸಮೃದ್ಧವಾದ ಕುಡಿತ ಮೆರೆತಗಳಿಂದ, ಕಪಟ ಮೋದ ಅನಾಚಾರ ಅತ್ಯಾಚಾರಗಳಿಂದ ಛಿದ್ರವಿಚ್ಛಿದ್ರವಾಗಿ ಅಧೋಗತಿಯನ್ನು ಮುಟ್ಟಿದ್ದ ಸಮಾಜದ ಪುನರುತ್ಥಾಪನೆಗಾಗಿ ಮಹಮ್ಮದನ ಜನ್ಮಧಾರಣೆ ಅತ್ಯಗತ್ಯವಾಗುತ್ತದೆ. ವಿದೇಶೀಯರ ದಾಸ್ಯದಲ್ಲಿ ಪಶುಪಕ್ಷಿಗಳಿಗಿಂತ ಕಡೆಯಾಗಿ ಬದುಕು ಸಾಗಿಸುತ್ತಿದ್ದ ಭಾರತೀಯರ ವಿಮೋಚನೆಗಾಗಿ ಗಾಂಧಿಯವರೂ, ಸಾವಿರಾರು ವರ್ಷಗಳಿಂದ ಸವರ್ಣೀಯರ ಕೈಯಲ್ಲಿ ಚಿತ್ರಹಿಂಸೆಗೊಳಗಾಗಿದ್ದು ನಿಮ್ನ ವರ್ಗದ ಜನರ ಉದ್ಧಾರಕ್ಕಾಗಿ ಅಂಬೇಡ್ಕರರೂ ಜನ್ಮಧಾರಣೆ ಮಾಡಿದ್ದು ಐತಿಹಾಸಿಕ ಅಗತ್ಯವಾಗಿತ್ತೆಂಬುದು ಸ್ಫಟಿಕ ಸ್ಪಷ್ಟ ಸಂಗತಿಯಾಗಿದೆ. ಕ್ಷುದ್ರದೇವತೆಗಳ ಉಪಾಸನೆಯಿಂದ, ನಾನಾ ಮತಗಳ ಪರಸ್ಪರ ವೈಷಮ್ಯದಿಂದ, ಮೌಢ್ಯ ಜಾಡ್ಯಗಳ ಸಾಂಕ್ರಾಮಿಕತೆಯಿಂದ, ನಿಮ್ನೋನ್ನತ, ಸ್ಪೃಶ್ಯಾಸ್ಪೃಶ್ಯ, ಸ್ತ್ರೀ ಪುರುಷ ಮೊದಲಾದ ಅಶ್ಲೀಲ ಭೇದಗಳಿಂದ ಕಲುಷಿತವಾದ ಸಮಾಜ ಬಸವಣ್ಣನವರಂಥ ಕಾರಣ ಪುರುಷನ ಆಗಮನವನ್ನು ನಿರೀಕ್ಷಿಸಿದ್ದು ಸಹಜವೇ ಸರಿ.

ಅಂಥ ಮಹಾಪುರುಷನನ್ನು ಕನ್ನಡ ಜನ ನಂದೀಶ್ವರಾವತಾರವೆಂದು ಕರೆದದ್ದಂತು ಔಚಿತ್ಯಪೂರ್ಣವಾಗಿದೆ. ಕೃಷಿ ಸಂಸ್ಕೃತಿಯ ಪ್ರಾರಂಭದಿಂದ ನಂದಿ ಕೃಷಿಕರ ಆರಾಧ್ಯ ದೈವನಾಗಿದ್ದಾನೆ; ಕೃಷಿಗೆ ಮಾತ್ರವಲ್ಲ ಮಹಾದೇವನ ವಾಹನವಾಗಿ ಧರ್ಮಕ್ಕಾಧಾರವಾಗಿದ್ದಾನೆ. ದ್ರಾವಿಡರು ವೃಷಭ ಧ್ವಜರಾಗಿದ್ದಿರಬೇಕೆಂದು ಹರಪ್ಪ ಮೋಹೆಂಜೊದಾರೊ ಶಿಲ್ಪ ಕೃತಿಗಳಿಂದ ಸುಸಂವೇದ್ಯವಾಗುತ್ತದೆ. ನಾಗರಿಕತೆಯ ಪ್ರಾದುರ್ಭಾವ ಸಮಯದಲ್ಲಿ ಒಕ್ಕಲುತನ ಕ್ರಾಂತಿಕಾರಕ ಘಟನೆಯಾಗಿ ನಂದಿ ಕ್ರಾಂತಿಯ ಸಂಕೇತವೂ ಆಗಿದ್ದಾನೆ. ಹೀಗೆ ಧರ್ಮ, ಸಂಸ್ಕೃತಿ ಮತ್ತು ಕ್ರಾಂತಿಗಳಿಗೆ ಸಂಕೇತವಾಗಿ, ಮಾನವಕೋಟಿಗೆ ಪ್ರಾಣಾಧಾರವಾಗಿರುವ ನಂದಿಯ ಅವತಾರವೇ ಬಸವೇಶ್ವರನೆಂಬ ಕಲ್ಪನೆಯಲ್ಲಿ ಹುರುಳಿಲ್ಲದಿಲ್ಲ.

*ಬ ಎಂಬಲ್ಲಿ ಎನ್ನ ಭವವು ಹರಿಯಿತ್ತಯ್ಯ*
*ಸ ಎಂಬಲ್ಲಿ ಸರ್ವಜ್ಞಾನಿಯಾದೆನಯ್ಯ*
ವ ಎಂದು ವಚಿಸುವರೆ ವಸ್ತು ಚೈತನ್ಯಾತ್ಮಕನಾದೆನಯ್ಯ

ಎನ್ನುವ ಪ್ರಭುದೇವರ ವಾಣಿಯೂ

*ಉತ್ತಿ ಬಿತ್ತುವ ಮಂತ್ರ, ಬಿತ್ತಿ ಬೆಳೆಯುವ ಮಂತ್ರ*
*ಸತ್ಯಶಿವ ಮಂತ್ರ, ನಿನ್ಹೆಸರು ॥ ಬಸವಯ್ಯ*
*ಸತ್ಯಶಿವ ಮಂತ್ರ, ನಿನ್ಹೆಸರು ॥ ಬಸವಯ್ಯ*
*ಮರ್ತ್ಯದೊಳು ಮಂತ್ರ, ಜೀವನಕೆ.*

ಎಂಬ ಜನಪದ ಗೀತೆಯೂ ಮೇಲಣ ಮಾತಿನ ಸತ್ಯವನ್ನು ಸಮರ್ಥಿಸುತ್ತದೆ. ನಂದಿ ಮತ್ತು ನಂದಿವಾಹನರ ಸಂಬಂಧ ವಾಗರ್ಥಗಳ ಬಾಂಧವ್ಯದಂತಿದೆ. ಈಶ್ವರನ ಬಿಜ್ಜ್ಯೋತಿಯೇ ನಂದಿ; ಈಶ್ವರನ ಕರುಣೆಯೇ ನಂದಿಯೆಂದರೂ ಸಲ್ಲುತ್ತದೆ. ದೇವರಲ್ಲ, ದೇವರ ಕರುಣೆಯೇ ಯೇಸುವಾಗಿ ಜನ್ಮಧಾರಣೆ ಮಾಡಿತೆಂಬುದು ಕ್ರಿಸ್ತೀಯರ ನಂಬಿಕೆ. ಆ ಮಾತು ಬಸವಣ್ಣನವರಿಗೆ ಸಮುಚಿತವಾಗಿ ಅನ್ವಯವಾಗುತ್ತದೆ.

ಬಸವಣ್ಣನವರು ಬುದ್ಧನಂತೆ ಬಾಯಲ್ಲಿ ಚಿನ್ನದ ಚಮಚವನ್ನಿಟ್ಟುಕೊಂಡು ಹುಟ್ಟಿದವರಲ್ಲ; ಯೇಸುವಂತೆ ಕಾನೀನರೂ ಅಲ್ಲ; ಮಹಮ್ಮದನಂತೆ ಅಜ್ಞಾತ ಕುಟುಂಬದೊಂದರಲ್ಲಿ ಜನ್ಮವೆತ್ತಿದವರು. ಬಾಗೆವಾಡಿ ಅಗ್ರಹಾರದ ದ್ವಿಜದಂಪತಿ ಕರ್ಮಠ ಸಂಪ್ರದಾಯದ ಮಾದರಸ ಮಾದಾಂಬಿಕೆಯರಿಗೆ, ಜಗತ್ತಿನ ಇತರ ಮಕ್ಕಳಂತೆ, ಮಗನಾಗಿ ಭೂಸ್ಪರ್ಶ ಮಾಡಿದವರು. ಬುದ್ಧನ ಜನನಾನಂತರ ಜ್ಯೋತಿಷಿಗಳು ಅವನ ಭವಿಷ್ಯದ ಬಗ್ಗೆ ಕಣಿ ನುಡಿದದ್ದುಂಟು. ಯೇಸು ಹುಟ್ಟಿದಾಗ ಮೂಡಣಗೊಂಟಿನ ಮಂತ್ರವಾದಿಗಳು ನಕ್ಷತ್ರದಂತೆ ತೋರಿದ ಬಾಲಕನನ್ನು ಹುಡುಕಿಕೊಂಡು ಬೆತ್ಲೆಹೇಮಿಗೆ ಬರುತ್ತಾರೆ; ಹುಟ್ಟಿದಾಗ ಕಣ್ಣುಬಿಡದಿದ್ದ ಬಸವಣ್ಣನವರಿಗೆ ಜಾತವೇದಮುನಿಗಳು ಲಿಂಗದರ್ಶನ ಮಾಡಿಸಿ, ಅವರ ಮುಂದಿನ ಭವಿತವ್ಯಕ್ಕೆ ನಾಂದಿ ಹಾಡುತ್ತಾರೆ. ಸಾಮಾನ್ಯವಾಗಿ ಜಗತ್ತಿನ ಪ್ರಾಣಿಕೋಟಿಯ ಹುಟ್ಟು ಸಾವುಗಳಲ್ಲಿ ವಿಭಿನ್ನತೆ ಕಾಣದಿದ್ದರೂ, ಸಾಮಾನ್ಯ ಹಾಗೂ ಮಹಾಪುರುಷರ ಜೀವನವಾಹಿನಿಗಳಲ್ಲಿ ವಿಶೇಷಾಂತರ ಕಂಡುಬರುತ್ತದೆ. ಮೇಲೆ ಉಲ್ಲೇಖಗೊಂಡಿರುವಂಥ ಘಟನೆಗಳು ಮಹಾತ್ಮರ ಭವ್ಯ ವ್ಯಕ್ತಿತ್ವಕ್ಕೊಡ್ಡಿದ ಕಾವ್ಯ ಕಲ್ಪದ ಪ್ರತಿಮೆಗಳಾಗಿವೆ. ಅಮೂರ್ತಕ್ಕೆ ಮೂರ್ತತ್ವವನ್ನು ಕಲ್ಪಿಸುವಲ್ಲಿ ಅಸಾಮಾನ್ಯವನ್ನು ಸಾಮಾನ್ಯಮತಿಗೆಟಕುವಂತೆ ನಿರ್ವಹಿಸುವಲ್ಲಿ ಪ್ರತಿಮೆ ತಾನಾಗಿಯೇ ಉದ್ಭವವಾಗುತ್ತದೆ.

ಬಸವೇಶ್ವರರ ಐತಿಹಾಸಿಕತೆಯ ಬಗ್ಗೆ ಸಂದೇಹ ಗೊಂದಲಗಳಿರುವುದು ಸಹಜವೇ. ಹರಿಹರ ಸಿಂಗಿರಾಜ ಲಕ್ಕಣ್ಣದಂಡೇಶಾದಿ ಕವಿಗಳ ಕೃತಿಗಳಲ್ಲಿ ಬಸವಣ್ಣನವರ





ಜೀವನದ ಬಗ್ಗೆ ಪರಸ್ಪರ ಭಿನ್ನ ವಿಭಿನ್ನ ಸಂಗತಿಗಳ ನಿರೂಪಣೆಯಿರುವುದೇ ಅವುಗಳ ಅಸ್ತಿತ್ವಕ್ಕೆ ಕಾರಣವಾಗಿದೆ. ಕಾಲ ಹಿಂದು ಹಿಂದಕ್ಕೆ ಸರಿದಂತೆಲ್ಲ ಮಹಾತ್ಮರ ಜೀವನ ಚರಿತ್ರೆಗಳು ಅಶ್ವತ್ಥ ವೃಕ್ಷದಂತೆ ವ್ಯಾಪಕವಾಗಿ ಹರಡುವುದುಂಟು; ಸ್ಫಟಿಕದಂತೆ ವಿಕಾಸಗೊಳ್ಳುವುದುಂಟು. ಅಂಥ ಚರಿತ್ರೆಗಳ ಬೆಳವಣಿಗೆಯಲ್ಲಿ ವಿಕಾಸತತ್ವವನ್ನು ಗುರುತಿಸಿದರೆ ತಪ್ಪಾಗಲಾರದು. ಕೇವಲ ಮೂವತ್ತಾರು ವರ್ಷಗಳ ಅಲ್ಪಾವಧಿಯಲ್ಲಿ ಶಿಥಿಲಗೊಂಡಿದ್ದ ಭಾರತೀಯ ಸಮಾಜದ ಬುಡವನ್ನಲುಗಾಡಿಸಿ, ನವಸಮಾಜ ಸೃಷ್ಟಿಗೆ ಪ್ರೇರಕವಾದ ಕನ್ನಡ ನಾಡಿನಲ್ಲಿ ವಚನಾಮೃತ ವರ್ಷವನ್ನು ಕರೆದು ಅನಂತಕಾಲದ ಕನ್ನಡಿಗರ ಮೇಲೆ ಅಚ್ಚಳಿಯದ ಪ್ರಭಾವವನ್ನು ಬೀರಿದ ಮಹಿಮಾನ್ವಿತ ಪ್ರಚಂಡ ಶಕ್ತಿಯನ್ನು ಒಂದೊಂದು ಕಾಲದ ಭಾವಜೀವಿ ತನ್ನ ಸಂಸ್ಕಾರಾನುಗುಣವಾಗಿ ಪರಿಭಾವಿಸಿಕೊಂಡಾಗ ಅದು ಭಿನ್ನ ಭಿನ್ನ ರೀತಿಯಲ್ಲಿ ಕಾಣಿಸಿಕೊಳ್ಳುವುದು ಅಸಹಜವೇನಲ್ಲ. ಒಬ್ಬ ಮಹಾವ್ಯಕ್ತಿ ಐತಿಹಾಸಿಕವಾಗಿ ಬಾಳು ಮುಗಿಸಿದನಂತರ ಅವನ ವ್ಯಕ್ತಿತ್ವ ನಕ್ಷತ್ರೋಜ್ವಲವಾಗಿ ಪ್ರಕಾಶಿಸುತ್ತದೆ; ಅದೊಂದು ಶಕ್ತಿಯಾಗಿ ಮಾನವನ ಮಾನಸ ಗರ್ಭದಲ್ಲಿ ಅನವರತ ವಿಕಸನಶೀಲವಾಗಿ ವೃದ್ಧಿ ಹೊಂದುತ್ತದೆ; ವೃದ್ಧಿಹ್ರಾಸಗಳು ಚಂದ್ರನಿಗೆ, ಹುಟ್ಟು ಸಾವುಗಳು ಸಾಮಾನ್ಯ ಮಾನವರಿಗೆ ಅನ್ವಯಿಸುತ್ತವೆಯೇ ಹೊರತು ಮಹಾತ್ಮರಿಗಲ್ಲ. ಕಾಲ ದೂರ ದೂರ ಸರಿದಷ್ಟು ಆ ಶಕ್ತಿ ಚರಿತ್ರೆಯ ಪೊರೆಗಳಚಿ, ಅನಿರ್ಬಂಧವಾಗಿ ಸರ್ವತ್ರ ಹರಡಿಕೊಳ್ಳುತ್ತದೆ, ಮುಸುಕು ತೆಗೆದ ಭರಣಿಯ ಕಸ್ತೂರಿಯಂತೆ. ಶ್ರೀರಾಮ ಶ್ರೀಕೃಷ್ಣರ ಕತೆ ಬೆಳೆದದ್ದೇ ಹೀಗೆ. ರಾಮಾಯಣದಲ್ಲಿ ಚರಿತ್ರೆಯೆಷ್ಟು, ಚರಿತ್ರೆಯಲ್ಲದ್ದೆಷ್ಟು ಎಂದು ಹುಡುಕುವುದೇ ಗಾಂಪತನವಾಗುತ್ತದೆ. ಬಸವಣ್ಣನವರ ಕತೆಯೂ ಅಷ್ಟೇ. ಅದು ವ್ಯಕ್ತಿಯ ಚರಿತ್ರೆಯಾಗದೆ, ಮಹಾಶಕ್ತಿಯೊಂದರ ವಿಕಾಸದ ಕತೆಯಾಗಿದೆ. ಹೀಗಾಗಿ ಅವರ ಜೀವನದಲ್ಲಿ ಬರುವ ಕೆಲವು ಘಟನೆಗಳನ್ನು ಚರಿತ್ರೆಯಲ್ಲಿಯೋ ಶಾಸನಗಳಲ್ಲಿಯೋ ಹುಡುಕುವ ಪ್ರಯತ್ನ ನಿರರ್ಥಕವಾಗುತ್ತದೆ. ಕಬ್ಬಿನ ರಸವನ್ನು ಕಡೆಗಣಿಸಿ ಸಿಪ್ಪೆಯನ್ನರಸುವ, ಹಣ್ಣನ್ನು ಸವಿಯದೆ ಅದನ್ನು ಬೆಳೆದವನ ವಿಳಾಸವನ್ನು ಹುಡುಕುವ ಬೆಪ್ಪನ ಅವಿವೇಕಕ್ಕೆಣೆಯಾಗುತ್ತದೆ. ಅತೀಂದ್ರಿಯಶಕ್ತಿಯ ಪ್ರಭಾವದಿಂದ ನಿಸರ್ಗವನ್ನು ನಿಯಂತ್ರಿಸಬಲ್ಲ ಸಾಮರ್ಥ್ಯ ಯೇಸು ಬಸವಣ್ಣರಂಥವರಿಗೆ ಲಭ್ಯವಾಗಿರಬಹುದಾದರೂ, ಅವರ ಜೀವನ ಚರಿತ್ರೆಯಲ್ಲಿ ಉಲ್ಲೇಖಗೊಂಡಿರುವ ಕೆಲವು ಪವಾಡಗಳು ಅವರ್ಣನೀಯ ಅಥವಾ ಅಧ್ಯಾತ್ಮಿಕ ಸಂಗತಿಗಳಿಗೊಡ್ಡಿದ ಪ್ರತಿಮೆಯಾಗಿದ್ದಿರಬಹುದು. ಒಟ್ಟಿನಲ್ಲಿ ಹೇಳುವುದಾದರೆ ಬಸವಣ್ಣನವರಂಥ ಮಹಾನುಭಾವರ ಜೀವನ ಚರಿತ್ರೆಯೆಂದರೆ ಕೇವಲ ಬಾಹ್ಯ ಘಟನೆಗಳ ಸರಮಾಲೆಯೇ ಅಲ್ಲ, ಅವರ ಅಂತರಂಗಿಕ ಕ್ರಿಯೆಯ ಕಿರಣಗಳ ಕಲಾಪವೂ ಅಹುದೆಂಬುದನ್ನು ಮರೆಯಲಾಗದು; ಅವರೆಂದೋ ಆಗಿಹೋದವರಲ್ಲ. ಅವರಿಂದೂ ನಮ್ಮೊಡನೆ ಬದುಕಿರುವ, ಮುಂದೆಂದು ನಾಡಿನ ಆಶೀರ್ವಾದ ಶಕ್ತಿಯಾಗಿ ಜನರನ್ನು ತಿದ್ದುವ ಮುನ್ನಡೆಸುವ ಶಾಶ್ವತ ಶಕ್ತಿಯೆಂಬುದನ್ನು ಮನಗಂಡಾಗ, ಅವರ ಬಗ್ಗೆ ಈ ತನಕ ಪ್ರಕಟಗೊಂಡಿರುವ, ಮುಂದೆ ರಚನೆಗೊಳ್ಳಬಹುದಾದ ಎಲ್ಲ ಕಾವ್ಯಗಳೂ ಅವರ ಮಹಾಜೀವನವಾಹಿನಿಗೊಡ್ಡಿದ ಪ್ರತಿಮೆಗಳೆಂದೇ ತಿಳಿಯಬೇಕಾಗುತ್ತದೆ.

ಬದ್ಧನ ಮರಣಾನಂತರ ಅವರ ಜೀವನ ಚರಿತ್ರೆ ಹಾಗೂ ತತ್ತ್ವೋಪದೇಶಗಳನ್ನು ಅವನ ಶಿಷ್ಯರು ಸಂಗ್ರಹಿಸುತ್ತಾರೆ; ಯೇಸುವಿನ ವಿಷಯವೂ ಅಷ್ಟೇ. ಅವರ ಶಿಷ್ಯರು ಪೂರ್ಣ ಪ್ರಾಮಾಣಿಕರೆನ್ನಬಹುದಾದರೂ, ಮಾನವಸಹಜವಾದ ಮರಹಾಲಸ್ಯ ಪ್ರೇಮಾತಿಶಯದಿಂದಾಗಿ ಅವರ ಸಂಗ್ರಹದಲ್ಲಿರುವುದೆಲ್ಲ ನೂರಕ್ಕೆ ನೂರುಪಾಲು ಸತ್ಯವಾದುದೇ ಎಂಬ ಸಂದೇಹಕ್ಕೆಡೆ ಇದ್ದೇ ಇದೆ. ಆದರೆ ಬಸವಣ್ಣನವರ ಜೀವನ ತತ್ತ್ವೋಪದೇಶಗಳ ಬಗೆಗೆ ಸಾಕಷ್ಟು ಅಸಲು ದಾಖಲೆಗಳು ದೊರೆಯುತ್ತವೆನ್ನುವುದನ್ನು ಮರೆಯುವಂತಿಲ್ಲ. ಅವರ ತತ್ತ್ವೋಪದೇಶಕ್ಕೆ ಅವರ ವಚನಗಳೇ ಪರಮ ಪ್ರಮಾಣ. ಅವರ ಜೀವನದ ಬಗೆಗೆ ಅವರ ಒಡನಾಡಿಗಳು ಆಡಿದ ಅಣಿನುಡಿಮುತ್ತುಗಳಿವೆ, ಚಾರಿತ್ರಿಕ ದಾಖಲೆಗಳಿವೆ, ಮೇಲಾಗಿ ಅವರ ವಚನಗಳೇ ಇವೆ. ಅವರಿಗೆ ಅದೂರದಲ್ಲಿಯೇ ಜೀವಿಸಿದ್ದ ಹರಿಹರ ಸೋಮನಾಥರಂಥ ನಿಷ್ಠಾವಂತ ಕವಿಗಳು ರಚಿಸಿದ ಜೀವನ ಚರಿತ್ರೆಗಳಿವೆ. ಈ ಎಲ್ಲ ಸಾಕ್ಷಿ ಪುರಾವೆಗಳ ಚಪ್ಪರದ ಮೇಲೆ ಅವರ ಜೀವನ ಚರಿತ್ರೆಯ ಬಳ್ಳಿ ಹಬ್ಬಿಸುವುದು ಕಷ್ಟಕರವಾದ ಕಾರ್ಯವಲ್ಲ. ಅವರ ವಚನಗಳು ಮುಂದಿನ ಶರಣರ ಭಾವಾವೇಶ ಕಲ್ಪನೆಗಳಿಗೆ ಎಡೆಕೊಟ್ಟಿದ್ದರೆ ಅಚ್ಚರಿಪಡಬೇಕಾದ್ದೂ ಇಲ್ಲ, ಶಂಕಿಸಬೇಕಾಗಿಯೂ ಇಲ್ಲ. ಅವರಂಥ ಕಾರಣಿಕರ ಜೀವನ ಐತಿಹಾಸಿಕಾಂಶ ಮತ್ತು ಕಾವ್ಯಾಂಶಗಳ ಹಾಸುಹೊಕ್ಕಾಗುವುದೇ ಸಹಜವೆಂಬುದನ್ನು ಯಾರೂ ಮರೆಯುವಂತಿಲ್ಲ.

(ಮುಂದುವರಿಯುತ್ತದೆ) ★

# ಕೋಮು ಸಾಮರಸ್ಯ : ಒಂದು ವಿಶ್ಲೇಷಣೆ

– ಶ್ರೀ ಶ್ರೀ ಪಂಡಿತಾರಾಧ್ಯ ಶಿವಾಚಾರ್ಯ ಸ್ವಾಮಿಗಳು
ಸಿರಿಗೆರೆ ಬೃಹನ್ಮಠ, ಸಾಣೆಹಳ್ಳಿ – ೫೭೭೫೧೫,
ಚಿತ್ರದುರ್ಗ ಜಿಲ್ಲೆ.

**ಮ**ನುಷ್ಯ ಉದ್ಧಾರವಾಗುವುದು, ಹಾಳಾಗುವುದು ಆತನ ಮನಸ್ಸಿನಿಂದಲೇ, ಆ ಮನಸ್ಸೇ ಇತರರ ಉನ್ನತಿ, ಅವನತಿಗೂ ಕಾರಣ. ಮನಸ್ಸಿನ ಮೇಲೆ ನಿಯಂತ್ರಣ ಸಾಧಿಸಿದವರು, ಮನಸ್ಸಿನ ವಿಕಾರಭಾವನೆಗಳಿಗೆ ಬಲಿಯಾದವರು ತಾವು ದುಃಖವನ್ನು ಅನುಭವಿಸುವುದರೊಂದಿಗೆ ಬೇರೆಯವರನ್ನೂ ದುಃಖದ ಮಡುವಿಗೆ ತಳ್ಳುತ್ತಾರೆ. ಅಂಥವರು ಕೆಲವೊಮ್ಮೆ ಕ್ರೂರ ಮೃಗಗಳಿಗಿಂತಲೂ ಕೀಳಾಗಿ ವರ್ತಿಸಬಲ್ಲರು. ಈ ಮನಸ್ಸಿನ ಚಂಚಲತೆಯಿಂದಾಗಿ ಏನೆಲ್ಲಾ ಸಮಸ್ಯೆಗಳು ಉದ್ಭವಿಸುತ್ತವೆ. ಆದಾಗ್ಯೂ ಮನುಷ್ಯ ದೇವರು, ಧರ್ಮದ ಹೆಸರು ಹೇಳುವುದನ್ನು ಮರೆಯುವುದಿಲ್ಲ ದೈವ್ವದ ಕಾರ್ಯ ಮಾಡುವುದನ್ನೂ ಬಿಡುವುದಿಲ್ಲ. ಮಾನವ ಅತಿಯಾದ ವಿಷಯ ವಾಸನೆಗಳ ದಾಸನಾಗುತ್ತಿರುವುದರಿಂದ ಇಂದು ಧರ್ಮ ಧರ್ಮವಾಗಿ ಉಳಿದಿಲ್ಲ. ಅದು ಜಾತಿಯಾಗಿ ಏನೆಲ್ಲಾ ಅನಾಹುತಗಳಿಗೆ ಕಾರಣವಾಗಿದೆ. ಆಗುತ್ತಲೂ ಇದೆ. ಇದರಿಂದಾಗಿ ಯುವ ಪೀಳಿಗೆ ಹಾಗೂ ವಿಚಾರವಂತ ಜನಾಂಗ ಈ ಧರ್ಮವೇ ಬೇಡವೆಂದು ಹೇಳಿದರೆ ಆಶ್ಚರ್ಯಪಡಬೇಕಾಗಿಲ್ಲ. ಧರ್ಮ ಹೇಗಿರಬೇಕು ಎಂಬುದನ್ನು ಬಸವಾದಿ ಶಿವಶರಣರು ಅತ್ಯಂತ ಸರಳವಾಗಿ ಹೇಳಿದ್ದರೂ ಅವರ ವಿಚಾರಗಳು ಜನಜೀವನದಲ್ಲಿ ಬೆಳಕಿಗೆ ಬಾರದಿರುವುದು ಅತ್ಯಂತ ವಿಷಾದನೀಯ.

*ದಯವಿಲ್ಲದ ಧರ್ಮವದೇವುದಯ್ಯಾ*
*ದಯವೇ ಬೇಕು ಸಕಲ ಪ್ರಾಣಿಗಳೆಲ್ಲರಲ್ಲಿಯು*
*ದಯವೇ ಧರ್ಮದ ಮೂಲವಯ್ಯಾ*
*ಕೂಡಲಸಂಗಯ್ಯನಂತಲ್ಲ ದೊಲ್ಲನಯ್ಯಾ.*

**ಧ**ರ್ಮ ದಯಾಮೂಲವಾಗಿರಬೇಕು. ಈ ದಯೆ ಕೇವಲ ಮಾನವರಿಗೆ ಮಾತ್ರ ಸೀಮಿತವಾಗಿರದೆ ವಿಶ್ವದಲ್ಲಿಯ ಸಕಲ ಜೀವರಾಶಿಯನ್ನೇ ಆವರಿಸಬೇಕು. ಇಲ್ಲವಾದಲ್ಲಿ ಅಂಥ ಧರ್ಮವನ್ನು ಮಾನವರು ಒತ್ತಟ್ಟಿಗಿರಲಿ; ದೇವರು ಕೂಡ ಮೆಚ್ಚುವುದಿಲ್ಲ. *ಧರ್ಮ ದಯೆಯ ತಳಹದಿಯನ್ನು ಹೊಂದಿದ್ದರೆ ಅದರಿಂದ ಜನರ ಸಂಘಟನೆಯಾಗುತ್ತದೆ. ಆದರ್ಶ ಬದುಕಿಗೆ ದಾರಿಯಾಗುತ್ತದೆ.* ಲೋಕದಲ್ಲಿ ಎಲ್ಲ ವರ್ಗ, ವರ್ಣ, ಭಾಷೆಯ ಜನರು ಪ್ರೀತಿ ವಿಶ್ವಾಸದಿಂದ ನೆಮ್ಮದಿಯ ಬಾಳು ಸಾಗಿಸಲು ಸಾಧ್ಯವಾಗುತ್ತದೆ.

ಆದರೆ ಇಂದು ಧರ್ಮ ದಯಾಮೂಲ ವಾಗುವ ಬದಲು ಭಯದ ಮೂಲವಾಗಿದೆ. ಆದರಿಂದಾಗಿ ಸಂಘಟನೆಗೆ ಬದಲು ಘರ್ಷಣೆಗೆ ಅವಕಾಶವಾಗಿದೆ. ಪ್ರೀತಿಗೆ ಬದಲು ದ್ವೇಷ ಹೆಡೆಯಾಡುವಂತಾಗಿದೆ. ಧರ್ಮ ಜಾತಿಯ ರೂಪ ತಳೆದು ವ್ಯಕ್ತಿ ವ್ಯಕ್ತಿಗಳ ನಡುವೆ ಸುಮಧುರ ಬಾಂಧವ್ಯ ಬೆಳಸದೆ ದ್ವೇಷದ ದಳ್ಳುರಿಗೆ ಕಾರಣವಾಗುತ್ತಿದೆ.

**ಜಾ**ತಿ ನಾವಾಗಿಯೇ ಮಾಡಿಕೊಂಡದ್ದು. ಅದು ವ್ಯಕ್ತಿಯೊಬ್ಬ ಮಾಡುವ ಉದ್ಯೋಗದ ಆಧಾರದ ಮೇಲೆ ಬೆಳಕಿಗೆ ಬಂದಿದೆ. ಕುರಿ ಕಾಯುವವನು ಕುರುಬನಾದ. ಪಶುಪಾಲನೆ ಮಾಡುವವನು ಗೊಲ್ಲನಾದ. ಕುಡಿಕೆ-ಮಡಿಕೆ ಮಾಡುವವನು ಕುಂಬಾರನಾದ. ವ್ಯವಸಾಯ ಮಾಡುವವನು ಒಕ್ಕಲಿಗನಾದ. ಕಬ್ಬಿಣದ ಕೆಲಸ ಮಾಡುವವನು ಕಮ್ಮಾರನಾದ. ಕಟ್ಟಿಗೆಯ ಕೆಲಸ ಮಾಡುವವನು ಬಡಗಿಯಾದ. ಬಟ್ಟೆ ತೊಳೆಯುವವನು ಅಗಸನಾದ. ಚರ್ಮದ ಕೆಲಸ ಮಾಡುವವನು ಚಮ್ಮಾರನಾದ. ವಾಸ್ತವವಾಗಿ ಇವು ಜಾತಿಯ ಸಂಕೇತಗಳಲ್ಲ. ಒಂದರ್ಥದಲ್ಲಿ ಪ್ರತಿಯೊಬ್ಬ ಮನುಷ್ಯನೂ ಸಂದರ್ಭಾನುಸಾರ ಅಗಸನೋ, ಕುಂಬಾರನೋ, ಕರುಬನೋ, ಕಮ್ಮಾರನೋ, ಚಮ್ಮಾರನೋ ಆಗಲೇಬೇಕಾಗುತ್ತದೆ. ಆದುದರಿಂದ ಈ ಕೃತಕ ಜಾತಿಯ ಭೂತವನ್ನು ಒದ್ದೋಡಿಸಬೇಕೆಂದು ಶರಣರು, ಸಂತರು, ಸಮಾಜಸುಧಾರಕರು ಹೇಳುತ್ತ ಬಂದಿದ್ದರೂ ಅದು ತೊಲಗದೆ ಮತ್ತಷ್ಟು ರಾಕ್ಷಸಾಕಾರದಲ್ಲಿ ಬೆಳೆದು ಮನುಷ್ಯರ ಮನುಷ್ಯತ್ವವನ್ನೇ ನಾಶ ಮಾಡುತ್ತಿದೆ.

*ನೆಲನೊಂದೆ ಹೊಲಗೇರಿ-ಶಿವಾಲಯಕ್ಕೆ*
*ಜಲವೊಂದೆ ಶೌಚಾಚಮನಕ್ಕೆ*
*ಕುಲವೊಂದೆ ತನ್ನ ತಾನರಿದವಂಗೆ*
*ಫಲವೊಂದೆ ಷಡುದರುಶನ ಮುಕ್ತಿಗೆ*
*ನಿಲವೊಂದೆ, ಕೂಡಲಸಂಗಮದೇವಾ, ನಿಮ್ಮನರಿದವಂಗೆ*

**ಹೊ**ರನೋಟಕ್ಕೆ ಹೊಲಗೇರಿ, ಶಿವಾಲಯ ಬೇರೆ ಬೇರೆ ಎನ್ನಿಸಿದರೂ ಅವಿರುವ ನೆಲ ಒಂದೇ. ಅಂತೆಯೇ ಶೌಚಕ್ಕೆ ಹಾಗೂ ಪೂಜೆಗೆ ಬಳಸುವ ನೀರು ತೋರಿಕೆಗೆ ಬೇರೆ ಬೇರೆಯಾಗಿ ಕಂಡರೂ ಆ ನೀರೆಲ್ಲ ಒಂದೇ. ಇದೇ ರೀತಿಯಲ್ಲಿ ಹಲವು ಕುಲಗಳಿದ್ದರೂ ತನ್ನ





ತಾನರಿತವಂಗೆ ಎಲ್ಲ ಕುಲವೂ ಶಿವಕುಲವಾಗಿಯೇ ಕಾಣುತ್ತವೆ. ಈ ಸತ್ಯವನ್ನು ತಿಳಿಯದೆ ಜನರು ಹಿಂದು, ಮುಸಲ್ಮಾನ್, ಕ್ರಿಶ್ಚಿಯನ್, ಸವರ್ಣೀಯ, ದಲಿತ, ಹಿಂದುಳಿದವ, ಮುಂದುವರಿದವ ಎಂದು ಜಾತಿಯ ಭೂತವನ್ನು ಮನಸ್ಸಿನಲ್ಲಿಟ್ಟುಕೊಂಡು ಪರಸ್ಪರರು ಹೊಡೆದಾಡುವ, ಕೊಲ್ಲುವ ಅಮಾನವೀಯ ಕೃತ್ಯಗಳಲ್ಲಿ ನಿರತರಾಗಿರುತ್ತಾರೆ. ಕೊನೆಗೆ ಅದಕ್ಕೆ ಧರ್ಮದ ಲೇಪನ ಬೇರೆ ಮಾಡುತ್ತಾರೆ. ನಿಜವಾದ ಧರ್ಮ ಬೋಧಿಸುವುದು ದಯೆಯನ್ನೇ ಹೊರತು ಕೊಲೆ, ಸುಲಿಗೆ, ಹಿಂಸೆಯನ್ನಲ್ಲ. ಅದಕ್ಕಾಗಿಯೇ ಬಸವಣ್ಣನವರು ಹೇಳುತ್ತಾರೆ :

*ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ!*
*ಕುಲವೇನೊ ಆವಂದಿರ ಕುಲವೇನೊ?*
*ಸಕಲ ಜೀವಾತ್ಮರಿಗೆ ಲೇಸನೆ ಬಯಸುವ*
*ನಮ್ಮ ಕೂಡಲಸಂಗನ ಶರಣರ ಕುಲಜರು !*

**ಮೇ**ಲು-ಕೀಳುಗಳನ್ನು ಜಾತಿಯಿಂದ ಗುರ್ತಿಸದೆ ನೀತಿಯಿಂದ ಗುರ್ತಿಸಬೇಕೆನ್ನುವ ಬಸವಣ್ಣನವರು ನಾಲಿಗೆಯ ರುಚಿಗಾಗಿ ಜೀವಂತ ಪ್ರಾಣಿಗಳನ್ನು ಕೊಲ್ಲುವವರು ಮಾದಿಗರು, ತಿನ್ನಬಾರದ ಹೊಲಸನ್ನು ತಿನ್ನುವವರು ನಿಜವಾದ ಹೊಲೆಯರು, ಸಕಲ ಜೀವಾತ್ಮರಿಗೆ ಒಳಿತು ಬಯಸುವವರು ಶ್ರೇಷ್ಠ ಕುಲಜರು ಎಂದು ಹೇಳಿರುವುದು ಚಿಂತನಾರ್ಹವಾಗಿದೆ. ಬಸವಣ್ಣನವರ ವಚನದ ಆಶಯದ ಹಿನ್ನೆಲೆಯಲ್ಲಿ ಒಬ್ಬರ ಕುಲಗೋತ್ರಗಳನ್ನು ಅಳೆಯಬೇಕೆ ಹೊರತು ಹುಟ್ಟಿನ ಕಾರಣದಿಂದಾಗಲಿ, ಕಸುಬಿನ ಕಾರಣದಿಂದಾಗಲಿ ಅಲ್ಲ. ಇದನ್ನೇ ದೇವರ ದಾಸಿಮಯ್ಯನವರು ಬೇರೊಂದು ರೀತಿಯಲ್ಲಿ ಹೇಳಿದ್ದಾರೆ.

*ಹೊಲೆಯರ ಬಾವಿಯಲೊಂದು ಎಲು ನೆಟ್ಟಿದ್ದಡೆ*
*ಹೊಲೆಯೆಂಬುದು ಲೋಕವೆಲ್ಲ.*
*ಹಲವೆಲುವಿದ್ದ ಬಾಯಿ ಒಲವರವ ನುಡಿದಡೆ*
*ಹೊಲೆಯರ ಬಾವಿಯಿಂದ ಕರಕಷ್ಟ ಕಾಣಾ! ರಾಮನಾಥ.*

**ಹು**ಟ್ಟಿನ ಕಾರಣದಿಂದಾಗಿ ಹೊಲೆಯರಾಗಿದ್ದು ಅವರು ಬಳಸುವ ಬಾವಿಯಲ್ಲಿ ಆಕಸ್ಮಾತ್ ಎಲುಬೊಂದು ನೆಟ್ಟಿದ್ದು ಅಥವಾ ಬಿದ್ದದ್ದು ಕಂಡರೆ ಮುಂದುವರಿದವರೆಂದು ಭಾವಿಸಿರುವ ಜನರು ಅಯ್ಯೋ: ಹೊಲೆ, ಹೊಲೆ ಎಂದು ಹುಯಿಲೆಬ್ಬಿಸುತ್ತಾರೆ. ಇಂಥ ದೃಶ್ಯವನ್ನು ಕಂಡಿರುವ ದಾಸಿಮಯ್ಯನವರು ಕೇಳುತ್ತಾರೆ : ಪ್ರತಿಯೊಬ್ಬರ ಬಾಯಲ್ಲಿರುವ ಹಲ್ಲುಗಳು ಎಲಬು ತಾನೆ? ಇಂಥ ಹಲವು ಎಲಬುಗಳಿರುವ ಬಾಯಿಂದ ಆಡಬಾರದ ಮಾತುಗಳನ್ನು ಆಡಿದರೆ ಅಂತವ ಆ ಹೊಲೆಯರ ಬಾವಿಗಿಂತ ಮೇಲಾಗಬಲ್ಲನೇ? ನಿಜವಾದ ಹೊಲೆಯ ಹೊಲಗೇರಿಯಲ್ಲಿರುವವನೋ ಅಥವಾ ಕೆಟ್ಟ ಮಾತುಗಳ ನ್ನಾಡುವ ಮುಂದುವರಿದ ಜನಾಂಗದ ಕೇರಿಯಲ್ಲಿರುವವನೋ? ಮನುಷ್ಯ ದೈನಂದಿನ ಬದುಕಿನಲ್ಲಿ ವಿವಿಧ ರೀತಿಯ ಕೆಲಸ ಮಾಡುತ್ತಾನೆ. ಏನೆಲ್ಲ ಮಾತುಗಳನ್ನು ಆಡುತ್ತಾನೆ. ಆದರೆ ಅವನು ಮಾಡುವ ಕೆಲಸಕ್ಕೂ, ಆಡುವ ಮಾತಿಗೂ ಸಂಬಂಧವೇ ಇರುವುದಿಲ್ಲ. ಮಾತೇ ಒಂದಾದರೆ ಕೃತಿಯೇ ಬೇರೊಂದಾಗಿರುತ್ತದೆ. ಮುಖವಾಡದ ಬದುಕೇ ಸಹಜ ಬದುಕು ಎಂಬಂತಾಗುತ್ತಿದೆ. ವ್ಯಕ್ತಿಯೊಬ್ಬ ಒಳ್ಳೆಯ ಮಾತುಗಳನ್ನಾಡುವಂತೆ ಅದಕ್ಕನುಗುಣವಾದ ಉತ್ತಮೋತ್ತಮ ಕೆಲಸ ಕಾರ್ಯಗಳನ್ನೂ ಮಾಡುತ್ತಿರಬೇಕು. ಆಗಲೇ ಧರ್ಮಕ್ಕೆ, ಧರ್ಮಾವಲಂಬಿ ಯಾದ ಮಾನವನಿಗೆ ಬೆಲೆ ಬರುವುದು. ಧರ್ಮ ಮಾತಿನ ಮಾಲೆಯಲ್ಲ. ಅದು ಆಚರಣಾ ಮೂಲವಾದುದು.

*ಕ್ರಿಯೆಯೇ ಜ್ಞಾನ, ಆ ಜ್ಞಾನವೇ ಕ್ರಿಯೆ,*
*ಜ್ಞಾನವೆಂದಡೆ ತಿಳಿಯುವುದು,*
*ಕ್ರಿಯೆಯೆಂದಡೆ ತಿಳಿದಂತೆ ಮಾಡುವುದು*
*ಪರಸ್ತ್ರೀಯ ಭೋಗಿಸಬಾರದೆಂಬುದು ಜ್ಞಾನ;*
*ಆದರಂತೆ ಆಚರಿಸುವುದೆ ಕ್ರಿಯೆ*
*ಅಂತು ಆಚರಿಸದಿದ್ದಡೆ ಅದೆ ಅಜ್ಞಾನ ನೋಡಾ.*
*ಕೂಡಲಚನ್ನಸಂಗಮದೇವಾ.*

**ಜ್ಞಾ**ನ ಬರೀ ತಿಳಿಯುವುದಾಗಲಿ, ಉಪದೇಶಿವುದಾಗಲಿ ಅಲ್ಲ. ಅದು ಆಚರಣೆಯಲ್ಲಿ ವ್ಯಕ್ತವಾಗಬೇಕು. ಇದೇ ಮಾತು ಧರ್ಮಕ್ಕೂ ಅನ್ವಯಿಸುತ್ತದೆ. ಧರ್ಮ ಕೇವಲ ಮತ್ತೊಬ್ಬರಿಗೆ ಉಪದೇಶಿಸಲಿಕ್ಕಾಗಿ ಇಲ್ಲ. ಧರ್ಮ ಹೇಳುವ ತತ್ವಗಳಂತೆ ಮೊದಲು ಅದರ ಉಪದೇಶ ನಡೆಯಬೇಕು. ಆಗಲೇ ಧರ್ಮಕ್ಕೆ ಮತ್ತು ಧರ್ಮೋಪದೇಶಕನಿಗೆ ಗೌರವ ಬರುವುದು. ಆದರೆ ಇಂದು ಅನೇಕ ಜನರು ಈ ಪ್ರಪಂಚ ಸುಧಾರಿಸದಷ್ಟು ಕೆಟ್ಟಿರುವಾಗ ನಾವೊಬ್ಬರು ಏನು ತಾನೆ ಮಾಡಲು ಸಾಧ್ಯ ಎಂಬ ನಿರಾಶೆಯ ಮಾತುಗಳನ್ನಾಡುತ್ತಿರುತ್ತಾರೆ. ಆದರೆ ಇದು ಪಲಾಯನವಾದಿಗಳ ವಾದವಾಗಬಹುದಷ್ಟೆ. ಇದಕ್ಕೆ ಬದಲು ನಾನೊಬ್ಬ ಸುಧಾರಣೆಯಾದರೆ ಈ ಜಗತ್ತಿನಲ್ಲಿ ಒಬ್ಬ ಮೂರ್ಖ ಕಡಿಮೆಯಾಗುತ್ತಾನೆ ಎಂದು ಏಕೆ ತಿಳಿಯಬಾರದು? ಆದುದ ರಿಂದ ಜಗತ್ತೇ ಕೆಟ್ಟಿರುವಾಗ ನಾನೊಬ್ಬ ಏನು ಮಾಡಲು ಸಾಧ್ಯ ಎಂದುಕೊಳ್ಳದೆ ನಾನೊಬ್ಬನಾದರೂ ಸನ್ಮಾರ್ಗದಲ್ಲಿ ನಡೆಯು ತ್ತೇನೆ ಎಂಬ ಸಂಕಲ್ಪ ತಳೆದು ಆ ನಿಟ್ಟಿನಲ್ಲಿ ಕಾರ್ಯೋನ್ಮುಖ ನಾಗಬೇಕು. ಆಗ ಜಗತ್ತು ತನ್ನಿಂದ ತಾನೆ ಸುಧಾರಿಸುತ್ತದೆ. ಈ ಹಿನ್ನಲೆಯಲ್ಲಿ ಬಸವಾದಿ ಶಿವಶರಣರು ನಮಗೆ ಮಾರ್ಗದರ್ಶಿ ಯಾಗಿದ್ದಾರೆ. ಅವರು ನುಡಿದಂತೆ ನಡೆದರು. ನಡೆದಂತೆ ನುಡಿದರು. ನುಡಿಯೊಳಗೆ ನಡೆಯನ್ನು ಪೂರೈಸಿದರು. ಲೋಕದ ಡೊಂಕನ್ನು ತಿದ್ದುವ ಮುನ್ನ ತಮ್ಮ ತಮ್ಮ ಅಂಕು ಡೊಂಕುಗಳನ್ನು ತಿದ್ದಿಕೊಂಡರು. ಈ ರೀತಿಯ ಬದಲಾವಣೆಗೆ ಮೂಲ ಪ್ರೇರಕ ಶಕ್ತಿಯಾಗಿದ್ದ ಬಸವಣ್ಣನವರನ್ನು ಕುರಿತು ಅಲ್ಲಮಪ್ರಭುದೇವರು ಆಡಿರುವ ಮಾತುಗಳನ್ನು ಗಮನಿಸಿರಿ.

*ಕಲ್ಯಾಣವೆಂಬ ಪ್ರಣತಿಯಲ್ಲಿ ಭಕ್ತರಸವೆಂಬ ತೈಲವನೆರೆದು,*
*ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು*
*ತೊಳಗಿ ಬೆಳಗುತ್ತಿದ್ದಿತಯ್ಯಾ ಶಿವನ ಪ್ರಕಾಶ!*
*ಆ ಬೆಳಗಿನೊಳಗೆ ಒಪ್ಪುತ್ತಿದ್ದರಯ್ಯಾ ಅಸಂಖ್ಯಾತ ಭಕ್ತಗಣಂಗಳು.*
*ಶಿವಭಕ್ತರಿರ್ದ ಕ್ಷೇತ್ರ, ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ?*
*ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೆ?*
*ಗುಹೇಶ್ವರಲಿಂಗದಲ್ಲಿ ಎನ್ನ ಪರಮಾರಾಧ್ಯ ಸಂಗನ ಬಸವಣ್ಣ ಕಂಡು*
*ಬದುಕಿದೆನು ಕಾಣಾ ಸಿದ್ಧರಾಮಯ್ಯಾ*

ಕಲ್ಯಾಣವೇ ಒಂದು ಪ್ರಣತಿ. ಅದಕ್ಕೆ ಭಕ್ತಿ ರಸವೇ ಎಣ್ಣೆ, ಸದಾಚಾರವೇ ಬತ್ತಿ, ಬಸವಣ್ಣನವರೇ ಜ್ಯೋತಿ. ಜ್ಯೋತಿ (ದೀಪ) ಜಾಜ್ವಲ್ಯಮಾನವಾಗಿ ಬೆಳಗಬೇಕಾದರೆ ಸದಾಚಾರದ ಬತ್ತಿಗೆ ಮಂಕು ಕವಿಯದಂತೆ ಆಗಾಗ ಆ ಮಂಕನ್ನು ತೊಡೆದು ಬತ್ತಿಯನ್ನು ತಿದ್ದಿತೀಡ ಬೇಕು. ಆಗ ಅದು ಪ್ರಕಾಶಮಾನವಾಗಿ ಉತ್ತಮ ಬೆಳಕು ಕೊಡಲು ಸಾಧ್ಯ. ಇಂದಿನ ದಿನಮಾನಗಳಲ್ಲಿ ಆಚಾರವೆಂಬ ಬತ್ತಿಗೆ ಸಾಕಷ್ಟು ಮಂಕು ಕವಿದಿದೆ. ಈ ಮಂಕನ್ನು ತೊಡೆದು ಬತ್ತಿ ಚೆನ್ನಾಗಿ ಉರಿಯುವಂತೆ ನೋಡಿಕೊಳ್ಳುವ ಕಾರ್ಯ ನಿರೀಕ್ಷಿತ ಮಟ್ಟದಲ್ಲಿ ಸಾಗುತ್ತಿಲ್ಲ. ಹೀಗಾದಾಗ ಬೆಳಕನ್ನು ಪಡೆಯಲು ಹೇಗೆ ಸಾಧ್ಯ? ಕೊನೆಗೆ ಅದು ಬೆಳಕು ಕೊಡದೆ ಬೆಂಕಿಯಿಡುವ ಕೊಳ್ಳಿಯಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ದೇಶದಲ್ಲಿ ಆಗುತ್ತಿರುವುದೂ ಇದೇ ತಾನೆ? ಧರ್ಮದ ಜ್ಯೋತಿಗೆ ಜಾತಿ, ಸ್ವಾರ್ಥ, ಅಹಂಕಾರ, ಅಧಿಕಾರ ವ್ಯಾಮೋಹ, ಕೀರ್ತಿಶನಿ ಮತ್ತಿತರ ಮಂಕು ಕವಿದಿದೆ. ಆಚಾರವೆಂಬ ಬತ್ತಿಯ ಕಡೆಗೆ ಯಾರ ಗಮನವೂ ಹರಿಯುತ್ತಿಲ್ಲ. ಇದರಿಂದಾಗಿ ಈ ನೆಲದಲ್ಲಿ ಮಾನವ ಮಾನವರ ನಡುವೆ ಪ್ರೀತಿ-ವಿಶ್ವಾಸಗಳು ನೆಲ ಕಚ್ಚಿ, ದ್ವೇಷಾಸೂಯೆಗಳು ಹೆಡೆಯೆತ್ತಿ, ಗಲಭೆ, ಕೊಲೆ, ಕೋಲಾಹಲಗಳು ಅತಿಯಾಗುತ್ತಿವೆ. ಮನುಷ್ಯತ್ವ ಮರೆಯಾಗುತ್ತಿದೆ. ಇದೇ ಪರಿಸ್ಥಿತಿ ಮುಂದುವರಿದರೆ ಈ ನೆಲದ ಮೇಲೆ ಯಾರೊಬ್ಬರೂ ನೆಮ್ಮದಿಯಿಂದ ಬಾಳಲಾಗುವುದಿಲ್ಲ.

ಈಗೀಗಲಂತೂ ಅನಾಚಾರದ ಮಂಕು ಕಿಚ್ಚಾಗಿ ಏನೆಲ್ಲವನ್ನು ಸುಟ್ಟು ಬೂದಿ ಮಾಡುವ ಮಟ್ಟ ತಲುಪಿದೆ. ಈ ಅನಾಚಾರದ ಮಂಕನ್ನು ತೆಗೆದು ಸದಾಚಾರದ ಬತ್ತಿಯನ್ನು ಬೆಳಗಿಸುವ ನೈಜ ಧಾರ್ಮಿಕ ಕಾರ್ಯ ನಾಡಿನೆಲ್ಲಡೆ ನಡೆಯ ಬೇಕಾಗಿದೆ. ಈ ಕಾರ್ಯವನ್ನು ಧರ್ಮಾಧಿಕಾರಿಗಳಾದವರೇ ಮಾಡಲಿ ಎಂದು ಬೇರೆಯವರು ಸುಮ್ಮನೆ ಕೈಕಟ್ಟಿ ಕುಳಿತರೆ ನಾಡಿಗೆ ಅಪಾಯ ತಪ್ಪಿದ್ದಲ್ಲ. ಧರ್ಮ ಕೇವಲ ಧರ್ಮಾಧಿ ಕಾರಿಗಳ ಸೊತ್ತೆಂದು ಉಳಿದವರು ದೂರ ಉಳಿದದ್ದರಿಂದ ಆ ಜನರು ಧರ್ಮವನ್ನು ಜಾತಿಯ ನ್ನಾಗಿಯೋ, ಮೂಢನಂಬಿಕೆಯ ಭೂತವನ್ನಾಗಿಯೋ, ಸ್ವಾರ್ಥ ಸಾಧನೆಯ ಬಂಡವಾಳ ವನ್ನಾಗಿಯೋ ಮಾಡಿಕೊಂಡು ಜನರನ್ನು ದಿಕ್ಕು ತಪ್ಪಿಸಿ ದಿಂಡುರುಳಿಸುತ್ತಿದ್ದಾರೆ. ಏನೆಲ್ಲ ಅನಾಚಾರ, ಅನಾಹುತಗಳಿಗೆ ಕಾರಣರಾಗುತ್ತಿದ್ದಾರೆ. ಆದುದರಿಂದ ಧರ್ಮವನ್ನು ಮೊದಲು ಮಠಾಧಿಪತಿ, ಪಾದ್ರಿ, ಮೌಲ್ವಿ, ಪೂಜಾರಿ-ಪುರೋಹಿತರ ಕಪಿಮುಷ್ಟಿಯಿಂದ ಮುಕ್ತಗೊಳಿಸಿ ಅದು ಸರ್ವರ ಸೊತ್ತಾಗುವಂತೆ ನೋಡಿಕೊಳ್ಳಬೇಕು. ಪ್ರತಿಯೊಬ್ಬರೂ ಎಚ್ಚೆತ್ತುಕೊಂಡು ಅಧರ್ಮ, ಅನಾಚಾರದ ಮಂಕನ್ನು ತಿದ್ದಿ ತೀಡಿ ಸದಾಚಾರದ ಜ್ಯೋತಿ ಜಾಜ್ವಲಮಾನವಾಗಿ ಬೆಳಗಿ ಬೆಳಕು ಕೊಡುವಂತೆ ಮಾಡಬೇಕು. ಆಗ ಜಾತಿ ಮತಗಳಿದ್ದರೂ ಅವುಗಳಿಂದ ಯಾವ ಅಪಾಯವೂ ಸಂಭವಿಸುವುದಿಲ್ಲ.

ಇವತ್ತು ಜಾತಿ ರಕ್ತಗತವಾಗಿರುವುದರಿಂದ ಅದನ್ನು ಬೇರು ಸಹಿತ ಕಿತ್ತು ಹಾಕುತ್ತೇವೆಂಬುದು ಒಂದು ಭ್ರಮೆಯಷ್ಟೆ. ಆದುದರಿಂದ ಜಾತಿಯ ನಿರ್ಮೂಲನೆಗಿಂತ ಮುಖ್ಯವಾಗಿ ಹೃದಯ ಪರಿವರ್ತನೆ ಮೂಲಕ ಜಾತಿಯ ವಿರಸ ವಿದ್ವೇಷ ಗಳನ್ನು ಕಳೆಯುವ ಸಂಕಲ್ಪ ಮಾಡಬೇಕು. ಜಾತಿ ಮನೆಯ ಹೊರಗೆ ಬರದಂತೆ ಎಚ್ಚರಿಕೆ ವಹಿಸಬೇಕು. ಆದರೆ ಇಂದು ಆ ಜಾತಿ ಮನೆಯಿಂದ ಹೊರಗೆ ಬಂದಿರುವುದು ಮಾತ್ರವಲ್ಲದೆ ಧರ್ಮದ ಸ್ಥಾನವನ್ನು ಆಕ್ರಮಿಸಿ ಸಮಾಜದ ಆರೋಗ್ಯವನ್ನೇ ಹಾಳುಮಾಡುತ್ತಿದೆ. ಅದೊಂದು ಏಡ್ಸ್ ಆಗಿ ಮನುಕುಲವನ್ನೇ ನುಂಗಿ ನೊಣೆಯುವ ಬಕಾಸುರನಾಗುತ್ತಿದೆ. ಈ ಜಾತಿಯ ಏಡ್ಸ್‌ನಿಂದಾಗಿ ಮನುಷ್ಯನ ಮನಸ್ಸು, ಬುದ್ಧಿ, ಭಾವಗಳು ಕೂಡ ರೋಗಪೀಡಿತವಾಗುತ್ತಿವೆ. ದೇಶದ ಬೇರೆ ಬೇರೆ ಭಾಗಗಳಲ್ಲಿ ನಡೆಯುತ್ತಿರುವ ನರಮೇಧವನ್ನು ನೋಡಿದರೆ ಇಲ್ಲಿ ಧರ್ಮ, ರಾಜಕೀಯಗಳಿಗೆಲ್ಲ ವಿವಿಧ ರೀತಿಯ ಏಡ್ಸ್ ತಗಲುತ್ತಿರುವುದನ್ನು ಕಾಣುತ್ತಿದ್ದೇವೆ. ಈ ನೆಲೆಯಲ್ಲಿ ಬಸವಾದಿ ಶಿವಶರಣರು ಆಚರಿಸಿ ಬೋಧಿಸಿದ ಧರ್ಮದ ಪರಿಪಾಲನೆಯನ್ನು ಎಲ್ಲರೂ ಅನುಷ್ಠಾನಕ್ಕೆ ತರುವ ಸತ್ಸಂಕಲ್ಪ ಮಾಡಿದರೆ ಮಾತ್ರ ಮನುಕುಲ ನೆಮ್ಮದಿಯಿಂದ ಬಾಳಲು ಸಾಧ್ಯ.

ಜಾತಿಯ ವ್ಯಾಮೋಹ ಅತಿಯಾಗಿ ಮನುಷ್ಯ ಮನುಷ್ಯರ ನಡುವಿನ ಪ್ರೀತಿಯ ಸೇತುವೆ ಕಡಿದು ಬೀಳುತ್ತಿದೆ. ಅದಕ್ಕೆ ಮತ್ತಷ್ಟು ಪುಟಕೊಟ್ಟು ದ್ವೇಷದ ದಳ್ಳುರಿಗೆ ಕಾರಣವಾಗುವ ವಾತಾವರಣ ನಿರ್ಮಾಣವಾಗುತ್ತಿದೆ. ಕೆಲವು ವರ್ಷಗಳ ಹಿಂದೆ ಮಾಮೂಲಿನಂತೆ ತರಕಾರಿ, ನೀರುಳ್ಳಿ, ದವಸ ಮಾರಲು ಸಿರಿಗೆರೆಯ ಸಂತೆಗೆ ಬಂದ ಮುಸಲ್ಮಾನ್ ವ್ಯಾಪಾರಿಗಳನ್ನು ಕೆಲವು ಪುಂಡು ಹುಡುಗರು ಹೊಡೆದು ಅವರ ಸಾಮಾನುಗಳನ್ನು ದೋಚಲಾರಂಭಿಸಿದರು. ಮಠದಲ್ಲಿಯೇ ಇದ್ದ ನಮಗೆ ಸುದ್ದಿ ಬರುತ್ತಲೇ ಆ ಸ್ಥಳಕ್ಕೆ ಹೋಗಿ ಹುಡುಗರಿಗೆ ಬೈದು, ಬೆದರಿಸಿ, ಕೆಲವರಿಗೆ ಹೊಡೆದು ಅವರೇ ಎಲ್ಲ ಸಾಮಾನು ಗಳನ್ನು ಜೋಡಿಸಿಕೊಡುವಂತೆ ವ್ಯವಸ್ಥೆ ಮಾಡಿದೆವು. ಆ ಹುಡುಗರು ಮುಸಲ್ಮಾನರ ನಡುವೆ ನಡೆದ ಘರ್ಷಣೆ ನೆಪವಾಗಿತ್ತು. "ಎಲ್ಲಿಯೋ ಗಲಭೆ ಆಯಿತೆಂದು ನಾವು ಅದಕ್ಕೆ ಮತ್ತಷ್ಟು ತುಪ್ಪ ಸುರಿಯಬಾರದು. ನಾವೆಲ್ಲ ಒಂದಾಗಿ ಬಾಳಬೇಕು. ಇಂದು ನೀವು ಅವರಿಗೆ ತೊಂದರೆ ಕೊಟ್ಟರೆ, ನಾಳೆ ನೀವು ಅವರ ಊರಲ್ಲಿ ಸಿಕ್ಕಾಗ ಅವರೂ ಅದನ್ನೇ ಮಾಡಿದರೆ ಗತಿ ಏನು? ಆದುದರಿಂದ ಯಾರೂ ಅವಿವೇಕಿಗಳಂತೆ ವರ್ತಿಸಬಾರದು" ಎಂದು ಆ ಹುಡುಗರಿಗೆ ವಿವೇಕ ಹೇಳಿ ಆಗುವ ಅನಾಹುತವನ್ನು ತಪ್ಪಿಸಿದೆವು. ಎಲ್ಲ ಕಡೆಯಲ್ಲೂ ಇದೇ ವಿಧಾನವನ್ನು ಅನುಸರಿಸಿದರೆ ಕೋಮುಗಲಭೆಗೆ ಅವಕಾಶವೇ ಇರುವುದಿಲ್ಲ. ಹಿಂದು ಯಾರು? ಮುಸಲ್ಮಾನ್ ಯಾರು? ಕ್ರಿಶ್ಚಿಯನ್ ಯಾರು? ಅವರವರ ರಕ್ತ ಬೇರೆ ಬೇರೆ ಇದೆಯೇ?

ಆಸ್ಪತ್ರೆ ಸೇರಿದ ರೋಗಿಯೊಬ್ಬನಿಗೆ ತುರ್ತಾಗಿ ರಕ್ತ ಬೇಕಾಗಿದ್ದರೆ ಆ ರೋಗಿ ಯಾವ ಜಾತಿಯವನು ಎಂದು ಯಾರೂ ಕೇಳುವುದಿಲ್ಲ. ಬದಲಾಗಿ ಅವನ ರಕ್ತದ ಗುಂಪು ಯಾವುದೆಂದು ತಿಳಿದು ಅದೇ ಗುಂಪಿನ ರಕ್ತ ಯಾರಲ್ಲಿದೆಯೋ ಅವರಿಂದ ರಕ್ತ ಪಡೆದು ರೋಗಿಗೆ ಕೊಟ್ಟು ಆತನ ಪ್ರಾಣ ಉಳಿಸುತ್ತಾರೆ. ರಕ್ತ ಪಡೆದ ವ್ಯಕ್ತಿ ಹಿಂದೂ ಆಗಿರಬಹುದು. ರಕ್ತ ಕೊಟ್ಟವ ಮುಸಲ್ಮಾನ್ ಆಗಿರಬಹುದು. ಹಿಂದು ಜಾತಿಯವರಿಗೆ ಮುಸಲ್ಮಾನ್ ಜಾತಿಯವರ ರಕ್ತವನ್ನು ಹೇಗೆ ಕೊಟ್ಟರೆಂದು ಯಾರೂ ಕೇಳುವುದಿಲ್ಲ. ಅಪಘಾತ ವಾದಾಗ ಮೊದಲು ಅವರ ಪ್ರಾಣ ಉಳಿಸಲು ಪ್ರಯತ್ನಿಸುತ್ತಾರೆಯೇ ಹೊರತು ಅಪಘಾತಕ್ಕೆ ತುತ್ತಾದವ ನಮ್ಮ ಬಂಧುವೇ? ನಮ್ಮ ಜಾತಿಯವನೇ ಎಂದು ಯಾರೂ ನೋಡುವುದಿಲ್ಲ. ಇಂತಿರುವಾಗ ದಿನನಿತ್ಯದ ವ್ಯವಹಾರದಲ್ಲಿ ಯಾಕೆ ಈ ಜಾತ್ಯಂಧತೆ? ಯಾವ ಧರ್ಮವೂ ದ್ವೇಷಿಸಲು ಹೇಳುವುದಿಲ್ಲ. ಹಿಂಸೆಯನ್ನು ಬೆಂಬಲಿಸುವುದಿಲ್ಲ. ಎಲ್ಲ ಧರ್ಮಗಳು ಹೇಳುವುದು, ಎತ್ತಿ ಹಿಡಿಯುವುದು ದಯೆ, ಪ್ರೀತಿ, ಸಹಕಾರ, ಹೊಂದಾಣಿಕೆ, ನೀತಿ ಮುಂತಾದ ಆದರ್ಶಗಳನ್ನು. ಆದರೆ ಮತೀಯ ಮತ್ತೇರಿಸಿಕೊಂಡ ಹುಂಬರು ಇಲ್ಲದ ಊಹಾಪೋಹಗಳನ್ನು ಹಬ್ಬಿಸಿ, ಶಾಂತ ವಾತಾವರಣವನ್ನು ಕದಡಿ, ತನ್ಮೂಲಕ ತಮ್ಮ ಬೇಳೆ ಬೇಯಿಸಿಕೊಳ್ಳುವ ಹುನ್ನಾರ ಮಾಡುತ್ತಾರೆ. ಅಂಥವುಗಳಿಗೆ ಪ್ರೋತ್ಸಾಹ ನೀಡಿದರೆ ಮುಂದೆ ಎಲ್ಲರೂ ನೋವು ಅನುಭವಿಸಬೇಕಾಗುತ್ತದೆ.

ನಮ್ಮಲ್ಲಿ ನೀತಿ, ಪ್ರೀತಿ, ಮಾನವೀಯತೆಗಿಂತ ಜಾತಿ, ಮತ, ಧರ್ಮಗಳು ಹೆಚ್ಚು ಪ್ರಭಾವಶಾಲಿಗಳಾಗುತ್ತಿವೆ. ಇದರಿಂದ ಒಳಿತಿಗಿಂತ ಕೆಡುಕೇ ಹೆಚ್ಚು. ಇದಕ್ಕೆಲ್ಲ ಪ್ರಮುಖ ಕಾರಣಗಳು ಪೂಜಾರಿ, ಪುರೋಹಿತರು, ಮಠ ಮಂದಿರಗಳು, ಚರ್ಚ್ ಹಾಗೂ ಮಸೀದಿಗಳು ಮತ್ತು ರಾಜಕೀಯ ವ್ಯವಸ್ಥೆ. ಇವು ಒಂದು ಮತ್ತೊಂದರ ತಪ್ಪುಗಳನ್ನು ಮುಚ್ಚಿ ಹಾಕಲು ಒಂದು ರೀತಿಯ ಅನೈತಿಕ ಸಂಬಂಧವನ್ನು ಹೊಂದಿರುತ್ತವೆ ಎಂದರೆ ಅತಿಶಯೋಕ್ತಿ ಏನಲ್ಲ. ಪ್ರಸ್ತುತ ರಾಜಕೀಯ, ಧಾರ್ಮಿಕ ನೇತಾರರಲ್ಲಿ ಬಹುತೇಕ ಜನರು ಸ್ವಾರ್ಥಿಗಳಾಗಿ ನೈಜ ಧರ್ಮವನ್ನು ಮರೆಮಾಚಿ ಜಾತಿಯ ನೆಲೆಯಲ್ಲಿಯೇ ಕೆಲಸ ಮಾಡುತ್ತಿರುವುದರಿಂದ ಎಲ್ಲೆಲ್ಲಿಯೂ ಶಾಂತಿ ನೆಲೆಸದ ವಾತಾವರಣ ನಿರ್ಮಾಣವಾಗಿದೆ. ಇದೇ ಪರಿಸ್ಥಿತಿ ಮುಂದುವರಿದರೆ ಕೋಮು ಸಾಮರಸ್ಯ ಮೂಡುವುದು ಕನಸಿನ ಗಂಟಾಗಬಹುದು.

ಇಂದಿನ ದಿನಮಾನಗಳಲ್ಲಿ ನಾಡಿನಲ್ಲಿ ನಡೆಯುತ್ತಿರುವ ವಿದ್ಯಮಾನಗಳನ್ನು ಗಮನಿಸಿದರೆ ಹೃದಯವಂತರ ಕರುಳು ಕಿತ್ತು ಬರುವಂತಾಗುತ್ತಿದೆ. ಇದಕ್ಕೆಲ್ಲ ಮೂಲಕಾರಣ ಮೇಲೆ ತಿಳಿಸಿರುವಂತೆ ಧರ್ಮ, ರಾಜಕೀಯ, ಜಾತೀಯತೆ, ಯಾವ ಧರ್ಮ ದಯಾ ಮೂಲವಾಗಿ ಜನರ ನೆಮ್ಮದಿಗೆ ಕಾರಣವಾಗ ಬೇಕಾಗಿತ್ತೋ ಅದೇ ಭಯಮೂಲವಾಗಿ ಜನತೆಯ ನೆಮ್ಮದಿಗೆ ಭಂಗ ತರುತ್ತಿರುವುದು ನಿಜಕ್ಕೂ ವಿಷಾದನೀಯ. ರಾಜಕೀಯ ಸ್ವಾರ್ಥ ಸಾಧನೆಗಾಗಿ ನಮ್ಮ ನಾಯಕರು ಹಲವಾರು ಹಾವುಗಳನ್ನು ಹರಿಬಿಟ್ಟು ನಂತರ ಮತ್ತೇನೋ ನಾಟಕವಾಡುತ್ತಿದ್ದಾರೆ. ಜಾತಿ ಇವತ್ತು ಇರುವಂತಹುದಲ್ಲ. ಅದು ತುಂಬಾ ಪುರಾತನ ಕಾಲದಿಂದಲೂ ಇತ್ತು. ಆದರೆ ಆ ಜಾತಿ ಹಿಂದೆಂದೂ ಇಂದಿನಷ್ಟು ಜಾತ್ಯಂಧತೆಯನ್ನು ಜನತೆಯಲ್ಲಿ ಬೆಳೆಸಿರಲಿಲ್ಲ. ಭಾರತೀಯರು ಪರಧರ್ಮ ಸಹಿಷ್ಣುಗಳು, ವಿಶಾಲ ಹೃದಯಿಗಳು, ಬಾ ಬಂಧು ಎಂದು ಸರ್ವರನ್ನೂ ಪ್ರೀತ್ಯಾದಾರಗಳಿಂದ ಗೌರವಿಸುವವರು ಎಂಬ ಭಾವನೆ ಇಂದು ಮರೆಯಾಗುತ್ತಿದೆ. ಮನುಷ್ಯ ಕ್ರೂರ ಮೃಗಕ್ಕಿಂತ ಕೀಳಾಗಿ ವರ್ತಿಸುತ್ತಿದ್ದಾನೆ. ಬುದ್ಧ, ಬಸವ, ಗಾಂಧಿಯಂಥವರು ಮನುಕುಲದ ಅಭ್ಯುದಯಕ್ಕಾಗಿ ಏನೆಲ್ಲ ತತ್ತ್ವೋಪದೇಶ ಮಾಡಿದ್ದರೂ ಅವು ಹೊಳೆಯಲ್ಲಿ ಹುಣಸೆಹಣ್ಣು ಕದಡಿ ದಂತಾಗಿದೆ. ಅವರ ತತ್ತ್ವಾದರ್ಶಗಳ ಬೆಳಕಿನಲ್ಲಿ ನಾವಿಂದು ಮತ್ತೆ ಜನಜಾಗೃತಿಯ ಕಾರ್ಯವನ್ನು ತುರ್ತಾಗಿ ಮಾಡ ಬೇಕಾಗಿದೆ. ಭಾರತೀಯ ಸತ್ಪರಂಪರೆಯನ್ನು ಎತ್ತಿ ಹಿಡಿಯ ಬೇಕಾಗಿದೆ. ಎಲ್ಲದಕ್ಕಿಂತ ಹೆಚ್ಚಾಗಿ ಸದ್ಯದ ಸಾಮಾಜಿಕ ಅನಾರೋಗ್ಯ ಉಲ್ಬಣಿಸದಂತೆ ಕಾಳಜಿ ವಹಿಸಬೇಕಾಗಿದೆ. ಮಾನವೀಯ ನೆಲೆಯಲ್ಲಿ ಜನಮನದ ವಿಕಾರವನ್ನು ಕಳೆದು ಮನೋವಿಕಾಸಕ್ಕೆ ಪೂರಕವಾದ ಕಾರ್ಯಕ್ರಮಗಳನ್ನು ರೂಪಿಸಲು ಸರ್ವರೂ ಮುಂದಾಗ ಬೇಕಾಗಿದೆ.

ಭಾರತ ಹಲವು ಜಾತಿ, ಧರ್ಮ, ಸಂಸ್ಕೃತಿ, ಸಂಪ್ರದಾಯ, ಭಾಷೆಗಳ ವೈವಿಧ್ಯತೆಯ ಜನರಿಂದ ಕೂಡಿದ ದೇಶ. ಆದರೂ ಈ ಅನೇಕತೆಯಲ್ಲಿಯೇ ಏಕತೆಯನ್ನು ಕಾಪಾಡಿಕೊಂಡು ಸೌಹಾರ್ದತೆಯಿಂದ ಒಂದಾಗಿ ಬಾಳಿದ್ದು ಈ ನೆಲದ ವಿಶೇಷ ಗುಣ. ಆದರೆ ಪ್ರಸ್ತುತ ದಿನಮಾನಗಳಲ್ಲಿ ಜಾತಿ, ಧರ್ಮ, ರಾಜಕೀಯಗಳ ಹಿನ್ನೆಲೆಯಲ್ಲಿ ಶಾಂತಿ ಕದಡಿ ವಿರಸ ವಿದ್ವೇಷಗಳು ಬೆಳೆಯುತ್ತಿವೆ. ಸಕಲ ಜೀವಾತ್ಮರ ಒಳಿತಿಗೆ ಕಾರಣವಾಗಬೇಕಾಗಿದ್ದ ಧರ್ಮ ಮನುಷ್ಯ ಬಾಂಧವ್ಯವನ್ನು ಕೆಡಿಸಲು ಕಾರಣವಾಗುತ್ತಿದೆ. ಇದಕ್ಕೆ ಕಾರಣ ಧರ್ಮದಲ್ಲಿ ಸ್ವಾರ್ಥ ಮತ್ತು ರಾಜಕೀಯ ಬೆರೆತದ್ದು. ಮಹಾಕವಿ

ಪಂಪ 'ಮಾನವ ಕುಲಂ ತಾನೊಂದೆ ವಲಂ, ಕುಲಂ ಕುಲಮಲ್ತು, ಛಲಂ ಕುಲಂ, ಗುಣಂ ಕುಲಂ, ಅಭಿಮಾನವೊಂದೆ ಕುಲಂ' ಎಂದು ಸಾರಿದ. ಇಲ್ಲಿ ಕುಲದ ಬದಲು 'ಧರ್ಮ' ಪದವನ್ನು ಬಳಸಿದರೆ ಪಂಪನ ಮಾತುಗಳಿಗೆ ವಿಶೇಷ ಮೆರಗು ಬರುತ್ತದೆ. ಪಂಪ ಹೇಳುವಂತೆ ಅಥವಾ ನಾವೆಲ್ಲ ತಿಳಿದಿರುವಂತೆ ಹುಟ್ಟಿನಿಂದ ಯಾರೊಬ್ಬರೂ ದೊಡ್ಡವರೋ, ಸಣ್ಣವರೋ ಆಗಲು ಸಾಧ್ಯವಿಲ್ಲ. ಗುಣಾವಗುಣಗಳಿಂದ ಒಬ್ಬ ದೊಡ್ಡವನೋ ಸಣ್ಣವನೋ ಆಗಲು ಸಾಧ್ಯ. ಛಲ, ಗುಣ, ಅಭಿಮಾನದ ಮೂಲಕ ಮನುಷ್ಯ ತನ್ನ ಹಿರಿಮೆಯನ್ನು ಮೆರೆಯಬೇಕೆ ಹೊರತು ಜಾತಿ, ಧರ್ಮ, ಸಂಪ್ರದಾಯಗಳಿಂದಲ್ಲ. ಪಂಪನ ಮಾತುಗಳನ್ನು ಬಸವಣ್ಣನವರು ಇನ್ನೂ ಸರಳವಾಗಿ ವಿವರಿಸಿದಂತಿದೆ.

*ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ;*
*ಛಲಬೇಕು ಶರಣಂಗೆ ಪರಸತಿಯನೊಲ್ಲನೆಂಬ;*
*ಛಲಬೇಕು ಶರಣಂಗೆ ಪರದೈವನೊಲ್ಲೆನೆಂಬ;*
*ಛಲಬೇಕು ಶರಣಂಗೆ ಲಿಂಗಜಂಗಮ ಒಂದೆ ಎಂಬ;*
*ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ;*
*ಛಲವಿಲ್ಲದವರ ಮೆಚ್ಚ; ಕೂಡಲಸಂಗಮದೇವ.*

ಬಸವಣ್ಣನವರು ಪ್ರತಿಪಾದಿಸುವ ಛಲ ಎಲ್ಲ ಜನರಲ್ಲೂ ನೆಲೆಗೊಂಡರೆ ಕೋಮುಗಲಭೆಯ ದಳ್ಳುರಿ ತನ್ನಿಂದ ತಾನೇ ತಣ್ಣಗಾಗುತ್ತದೆ. ಆದರೆ ವೈದಿಕ ಪರಂಪರೆಯ ಜಡವಾದಿಗಳು ವಿಧಿವಾದ, ಹಣೇಬರಹ, ಕರ್ಮಸಿದ್ಧಾಂತ, ಹಿಂದುತ್ವ ಮತ್ತಿತರ ಕಗ್ಗವನ್ನು ಜನರ ಮನದಲ್ಲಿ ತುಂಬಿ ಆ ಮೂಲಕ ತಮ್ಮ ತೆವಲುಗಳನ್ನು ತೀರಿಸಿಕೊಳ್ಳುವ ಸಂಚು ಮಾಡುತ್ತಾರೆ. ಕೋಮುವಾದಕ್ಕೆ ಕಾರಣರಾಗುತ್ತಾರೆ. ಅವರ ಹಿಕ್ಮತ್ತಿನ ಹಿಂದಿನ ಸ್ವಾರ್ಥವನ್ನು ಅನಾವರಣಗೊಳಿಸಿ ಶರಣರು ಕಟ್ಟಬಯಸಿದ್ದ ಸುಂದರ ಕಲ್ಯಾಣ ನಾಡನ್ನು ನಾವಿಂದು ಕಟ್ಟಬೇಕಾಗಿದೆ. ಜನರು ನಿಜಕ್ಕೂ ತುಂಬಾ ಒಳ್ಳೆಯವರು. ಅವರು ಮಠ, ಮಂದಿರ, ಚರ್ಚ್‌ಗಳಲ್ಲಿ ಜಾತಿಯನ್ನು ಕಾಣುವುದಿಲ್ಲ. 'ದೇವನೊಬ್ಬ ನಾಮ ಹಲವು' ಎಂಬ ತತ್ವ ಅವರಿಗೆ ತಿಳಿಯದಿದ್ದರೂ ಆಚರಣೆಯಲ್ಲಿ ಆ ತತ್ವವನ್ನೇ ಪ್ರತಿಪಾದಿಸುತ್ತಿರುತ್ತಾರೆ. ಅಂಥ ಜನತೆಯಲ್ಲಿ ಧರ್ಮಾಂಧತೆ, ಜಾತ್ಯಂಧತೆ ಮುಂತಾದವುಗಳನ್ನು ತುಂಬಿ ಸಾಮಾಜಿಕ ಅನಾರೋಗ್ಯವನ್ನು ಹಾಳುವ ಮಾಡುವ ಮೂಲಕ ಅಧಿಕಾರದ ಗದ್ದುಗೆ ಏರಲು ಸನ್ನಾಹ ಮಾಡುವ ಎಲ್ಲ ಶಕ್ತಿಗಳ ವಿರುದ್ಧ ಹೋರಾಡಬೇಕಾದ್ದು, ಜನರಲ್ಲಿ ಜಾಗೃತಿ ಮೂಡಿಸಬೇಕಾದ್ದು ವಿವೇಕಶೀಲರ ಕರ್ತವ್ಯವಾಗಬೇಕಾಗಿದೆ.

★

## ಸಿದ್ಧಗಂಗಾ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಸನ್ಮಾನ್ಯರೇ,

ಕಳೆದ ನಲವತ್ತು ವರ್ಷಗಳಿಂದ, ಪರಮಪೂಜ್ಯ ಶ್ರೀಗಳವರ ದಿವ್ಯಾಶೀರ್ವಾದ ಮತ್ತು ಮಾರ್ಗದರ್ಶನದಿಂದ ಶ್ರೀಮಠದ ಮುಖವಾಣಿಯಾಗಿ ಪ್ರಕಟವಾಗುತ್ತಿರುವ 'ಸಿದ್ಧಗಂಗಾ' ಮಾಸಪತ್ರಿಕೆಗೆ ಆಜೀವ ಚಂದಾದಾರರಾಗುವುದರ ಮೂಲಕ ಪತ್ರಿಕೆಯ ಮುನ್ನಡೆಗೆ ಕಾರಣಕರ್ತರಾಗಿದ್ದೀರಿ. ಈ ಸಂದರ್ಭದಲ್ಲಿ ತಮ್ಮ ಸಹಕಾರವನ್ನು ತುಂಬು ಹೃದಯದಿಂದ ಸ್ಮರಿಸುತ್ತೇವೆ.

ದಿನೇ ದಿನೇ ಮುದ್ರಣ ಸಾಮಗ್ರಿಗಳ ವೆಚ್ಚ ಅಧಿಕವಾಗುತ್ತಿದ್ದು ಅದಕ್ಕನುಗುಣವಾಗಿ ಪತ್ರಿಕೆಯ ಮುದ್ರಣದ ಬೆಲೆಯೂ ಹೆಚ್ಚಾಗುತ್ತಿದೆ. ರೂ. ೫೦೦/೬೦೦ಗಳನ್ನು ನೀಡಿದ ಆಜೀವ ಚಂದಾಹಣವನ್ನು ನಿಶ್ಚಿತ ಠೇವಣಿಯಲ್ಲಿ ತೊಡಗಿಸಿದ್ದು ಅದರಿಂದ ಬರುವ ಬಡ್ಡಿ ಹಣದಿಂದ ಪತ್ರಿಕೆಯನ್ನು ಪ್ರಕಟಿಸಲು ಕಷ್ಟಸಾಧ್ಯವಾಗಿದೆ. ಈಗ ಬ್ಯಾಂಕಿನ ಬಡ್ಡಿ ದರವು ಕಡಿಮೆ ಆಗಿರುವ ವಿಚಾರ ತಮಗೆ ತಿಳಿದಿದೆ. ಪ್ರಸ್ತುತ ೫೦೦ ರೂ. ಠೇವಣಿಗೆ ೩೨.೫೦ ರೂ. ಹಾಗೂ ೬೦೦ ರೂ.ಗಳಿಗೆ ೩೯ ರೂ ಬರುತ್ತದೆ. ಈ ಬಡ್ಡಿ ಹಣದಿಂದ ೧೨ ಸಂಚಿಕೆಗಳಿಗೆ ತಗಲುವ ವೆಚ್ಚವನ್ನು ಸರಿದೂಗಿಸಲು ಕಷ್ಟವಾಗಿದೆ. ಪ್ರಸ್ತುತ ಶೇಕಡ ೫೦ರಷ್ಟು ನಷ್ಟವಾಗುತ್ತಿದೆ ಎಂಬ ಅಂಶವನ್ನು ವಿನಯ ಪೂರ್ವಕವಾಗಿ ತಮ್ಮ ಗಮನಕ್ಕೆ ತರಬಯಸುತ್ತೇವೆ.

ಪ್ರಸ್ತುತ ಶ್ರೀಮಠದಲ್ಲಿ ೮೦೦೦ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅವರ ಭವ್ಯಭವಿಷ್ಯವನ್ನು ರೂಪಿಸುವಲ್ಲಿ ಪರಮಪೂಜ್ಯ ಶ್ರೀಗಳವರು ತಮ್ಮನ್ನು ಅರ್ಪಿಸಿಕೊಂಡು ಅನುಪಮ ಸೇವೆ ಸಲ್ಲಿಸುತ್ತಿದ್ದಾರೆ. ತಾವು ದಯವಿಟ್ಟು ಪೂಜ್ಯ ಶ್ರೀ ಶ್ರೀಗಳವರು ಸಲ್ಲಿಸುತ್ತಿರುವ ಶ್ರೇಷ್ಠ ಸೇವೆಯನ್ನು ಗಮನದಲ್ಲಿಟ್ಟುಕೊಂಡು 'ಸಿದ್ಧಗಂಗಾ' ಪ್ರಕಟಣೆಗೆ ಒದಗಿರುವ ಆರ್ಥಿಕ ಸಂಕಷ್ಟವನ್ನು ದೂರಮಾಡಿ ಸಿದ್ಧಗಂಗಾ ಮತ್ತಷ್ಟು ಅರ್ಥಪೂರ್ಣವಾಗಿ ಪ್ರಕಟವಾಗಲು ನೆರವು ಮತ್ತು ಸಹಕಾರ ನೀಡಬೇಕಾಗಿ ಕಳಕಳಿಯಿಂದ ಕೋರುತ್ತೇವೆ.

ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಅಪ್ಪಣೆಕೊಡಿಸಿದಂತೆ ಜುಲೈ ೨೦೦೪ರಿಂದ ಆಜೀವ ಚಂದಾಹಣವನ್ನು ೬೦೦ ರಿಂದ ೧೦೦೦ ರೂ.ಗಳಿಗೆ ಹೆಚ್ಚಿಸಲಾಗಿದೆ.

ಈಗಾಗಲೇ ಆಜೀವ ಚಂದಾದಾರಾಗಿರುವ ಪತ್ರಿಕಾಭಿಮಾನಿಗಳು ೧೦೦೦ ರೂ.ಗಳಿಗೆ ಸರಿಹೊಂದುವಂತೆ. ಅಂದರೆ ಹಿಂದೆ ಸಂದಾಯ ಮಾಡಿದ್ದ ೫೦೦ ರೂ. ಮತ್ತು ೬೦೦ ರೂ.ಗಳನ್ನು ಕಳೆದು ಉಳಿದ ಹಣವನ್ನು ರೂ. ೫೦೦ ಮತ್ತು ರೂ. ೪೦೦ಗಳನ್ನು ನಗದು/ ಎಂಓ/ಡಿ.ಡಿ./ಚೆಕ್ ಮೂಲಕ ಸಿದ್ಧಗಂಗಾ ಮಾಸಪತ್ರಿಕೆಯ ಹೆಸರಿನಲ್ಲಿ ಕಳುಹಿಸಬೇಕಾಗಿ ಕೋರಲಾಗಿದೆ. ತಾವು ಹಣ ಕಳುಹಿಸುವಾಗ ತಮ್ಮ ವಿಳಾಸದಲ್ಲಿ ಎಲ್.ಎಂ. ಸಂಖ್ಯೆಯನ್ನು ತಪ್ಪದೆ ನಮೂದಿಸಬೇಕು. ತಾವು ನಮ್ಮ ಮನವಿಗೆ ಸ್ಪಂದಿಸಿ ಪತ್ರಿಕೆಯ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸುವಿರೆಂದು ಭಾವಿಸಿದ್ದೇವೆ.

ಹೆಚ್.ಬಿ. ಗಂಗಾಧರಯ್ಯ
ಪ್ರಕಾಶಕರು







# ಮಕರ ಸಂಕ್ರಮಣ

– ಟಿ.ಆರ್. ಮಹಾದೇವಯ್ಯ
೧೩೬, ೧ನೇ ಮುಖ್ಯರಸ್ತೆ, ೧ನೇ ಬ್ಲಾಕ್,
ನಾಗರಬಾವಿ ೨ನೇ ಹಂತ,
ಬೆಂಗಳೂರು – ೫೬೦ ೦೭೨.

ಪ್ರಕೃತಿ ಮಡಿಲಲ್ಲಿ ಬಾಳುತ್ತಾ ಅದರ ಏರಿಳಿತಗಳಿಗೆ ಸ್ಪಂದಿಸುವ ಮನುಷ್ಯ ಋತುಮಾನವನ್ನು ಅನುಸರಿಸಿ ಹಬ್ಬ ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದಾನೆ. ಪ್ರತಿವರ್ಷ ಚಳಿಗಾಲ ಮುಗಿದು ಬಿಸಿಕಾಲ ಆರಂಭವಾಗುವ ಸಂಧಿಕಾಲದಲ್ಲಿ ಮರಕ ಸಂಕ್ರಮಣ ಬರುತ್ತದೆ. ಇದೊಂದು ಶುಭ ಮಹೂರ್ತ. ಈ ಮಹತ್ವಪೂರ್ಣದಿನ ಸಾಮಾನ್ಯವಾಗಿ ಮಾರ್ಗಶಿರ ಇಲ್ಲವೇ ಪುಷ್ಯಮಾಸದಲ್ಲಿ (ಜನವರಿ ೧೩ ಅಥವಾ ೧೪) ಬರುವುದು. 'ಸಂಕ್ರಮಣ' ಎಂಬ ಪದಕ್ಕೆ ೧. ಒಟ್ಟಿಗೆ ಹೋಗುವುದು; ಸಹಭಾಗಿತ್ವ, ೨. ದಾಟುವಿಕೆ, ೩. ಮುಂದುವರಿಯುವಿಕೆ, ೪. ಪರಿವರ್ತನೆ, ೫. ಪರ್ವಕಾಲ, ಸಂಧಿಕಾಲ ಎಂಬ ಅರ್ಥಗಳಿವೆ.

ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಯನ್ನು ಪ್ರವೇಶಿಸುವ ಸಂಧಿಕಾಲವಿದು. ಅಂದಿನಿಂದ ಸೂರ್ಯನು ವಿಷುವ ವೃತ್ತದಿಂದ ಪೂರಾ ದಕ್ಷಿಣಕ್ಕೆ ಸಾಗುತ್ತಾನೆ. ಸೂರ್ಯನು ಮಕರರಾಶಿಯನ್ನು ಪ್ರವೇಶಿಸಿ ದಕ್ಷಿಣಾಯನವನ್ನು ಮುಗಿಸಿ ಉತ್ತರಾಯಣವನ್ನು ಪ್ರಾರಂಭಿಸುವ ಮಹಾಪರ್ವದಿನವೇ ಮಕರ ಸಂಕ್ರಮಣ. ಮಕರ ಮಾಸವು ಜನವರಿ ೧೩ ಅಥವ ೧೪ ರಿಂದ ಆರಂಭಗೊಂಡು ಫೆಬ್ರವರಿ ೧೨ ಅಥವಾ ೧೩ನೇ ತಾರೀಖಿನವರೆಗೆ ಇರುತ್ತದೆ.

### *ಸಕ್ರಾಂತಿ ಬೆಳಕು*

ಸೂರ್ಯನು ಮಕರರಾಶಿಯಲ್ಲಿರುವಾಗ ಸೂರ್ಯೋದಯ ಕಾಲದಲ್ಲಿ ಸ್ನಾನಮಾಡಿದರೆ ಸಕಲ ಪಾಪಗಳೂ ಪರಿಹಾರವಾಗುತ್ತವೆ ಎಂಬ ನಂಬಿಕೆಯಿದೆ. ಅಂತೆಯೇ ಜನರು ತೀರ್ಥಯಾತ್ರೆಗೋ ನದಿಗಳ ಸಂಗಮಕ್ಕೋ ಹೋಗಿ ಪವಿತ್ರಸ್ನಾನಮಾಡಿ, ದೇವಸ್ಥಾನಗಳಲ್ಲಿ ಪೂಜೆಮಾಡಿ ಪ್ರಸಾದ ಸೇವಿಸಿ ಬರುತ್ತಾರೆ. ಉತ್ತರ ಕರ್ನಾಟಕದಲ್ಲಿ ಇದನ್ನು 'ಸಂಕ್ರಾಂತಿ ಜಳಕ' ಎನ್ನುತ್ತಾರೆ.

### *ವಿಶೇಷಪೂಜೆ*

ಸಂಕ್ರಮಣ ಅಥವಾ ಸಂಕ್ರಾಂತಿ ಬರುವ ಸಮಯ ನಿಜವಾದ ಅರ್ಥದಲ್ಲಿ ಪರ್ವಕಾಲ. ಡಿಸೆಂಬರ್ ತಿಂಗಳಲ್ಲಿ ಆರಂಭವಾಗುವ ಧನುರ್ಮಾಸ ಒಳ್ಳೆಯ ಚಳಿಗಾಲ. ಅದು ತನ್ನೊಂದಿಗೆ ಹಿಮರಾಜನನ್ನು ಕರೆತರುತ್ತದೆ. ಕೊರೆಯುವ ಚಳಿಗೆ ಮನುಷ್ಯನ ದೇಹ ಧನುಸ್ಸಿನ ಆಕಾರವಾಗುವಂತೆ! ಧನುರ್ಮಾಸ ಪೂರ್ತಿ ಬೆಳಗಿನ ಜಾವದಲ್ಲೇ ಪೂಜೆ. ತಣ್ಣೀರು ಸ್ನಾನ, ಪೂಜಾದಿ ಕೈಂಕರ್ಯ, ಬಿಸಿ ಹುಗ್ಗಿಯ ಪ್ರಸಾದ – ಇವು ಈ ಮಾಸದ ವಿಶೇಷ. ಎಲ್ಲಾ ದೇವಸ್ಥಾನಗಳಲ್ಲೂ ವಿಶೇಷಪೂಜೆ, ಸ್ವಾದಿಷ್ಟ ನೈವೇದ್ಯ!

ಧನುರ್ಮಾಸವನ್ನು ಶೂನ್ಯಮಾಸವೆನ್ನುತ್ತಾರೆ. ಆಗ ಯಾವ ಶುಭಕಾರ್ಯಗಳು ನಡೆಯುವುದಿಲ್ಲ. ಆಗ ನಿಂತು ಹೋಗಿದ್ದ ಮದುವೆ, ಮುಂಜಿ ಮೊದಲಾದ ಮಂಗಳಕಾರ್ಯಗಳು ಸಂಕ್ರಾಂತಿಯಿಂದ ಪುನರಾರಂಭಗೊಳ್ಳುತ್ತವೆ.

### *ಜೀವನ ಪರಿವರ್ತನೆ*

ಸೂರ್ಯನು ಹುಟ್ಟಿ ಮೇಲೆ ಮೇಲೆ ಬಂದಂತೆ ಚಳಿಯ ತೀವ್ರತೆ ಕಡಿಮೆಯಾಗಿ ಹಿತವಾದ ಬಿಸಿಲು ಹರಡುವಂತೆ, ಜನಜೀವನದಲ್ಲೂ ಸಹ ಕಾವು ಏರಿ, ಜಡತೆ ತೊಲಗಿ ನವೋತ್ಸಾಹ ಚಿಮ್ಮುತ್ತದೆ. ಚಳಿಗಾಲದ ಕೊರೆತದಿಂದ ಬರಡಾಗಿದ್ದ ಪ್ರಕೃತಿಯಲ್ಲೂ ನವಚೇತನ ಸುಳಿದಾಡ ತೊಡಗುತ್ತದೆ. ಕೊರಡಾಗಿದ್ದ ಮರಗಿಡ ಬಳ್ಳಿಗಳು ಚಿಗುರಿನಿಂದ ನಳನಳಿಸುತ್ತವೆ. ನಿಸರ್ಗದ ಮಡಿಲಲ್ಲಿ ಹೇಗೋ ಹಾಗೆಯೇ ಮಾನವ ಲೋಕದಲ್ಲೂ ಸಹ ಪರಿವರ್ತನೆ ಕಂಡುಬರುತ್ತದೆ. ಚಳಿಯಿಂದ ಮುದುಡಿದ್ದ ಮಾನವನ ಮೈಯಲ್ಲೂ ಬಿಸಿ ಹುಟ್ಟಿ ಹೊಸಹುರುಪು ಕಾಣಿಸುತ್ತದೆ. ಹೀಗೆ ಸೃಷ್ಟಿಯ ಸೊಬಗು, ಮಾನವ ಜೀವನದ ಪರಿವರ್ತನೆ – ಈ ಎರಡೂ ದೃಷ್ಟಿಯಿಂದ ಈ ಹಬ್ಬಕ್ಕೆ ಮಹತ್ವವಿದೆ.

### *ಸಂಭ್ರಮದ ಹಬ್ಬ*

ಎಳ್ಳು ಪ್ರೀತಿ ಸ್ನೇಹದ ಸಂಕೇತ, ಬೆಲ್ಲ ಮಾಧುರ್ಯ ಸಂಕೇತ. ಮಾನವ ಸಂಬಂಧಗಳು ಮಧುರವಾಗಿರಲೆಂಬ ಸಂದೇಶಹೊತ್ತ ಸಂಕ್ರಾಂತಿಯನ್ನು ಎಳ್ಳು ಹಬ್ಬ ಎನ್ನಬಹುದೇನೋ! ಏಕೆಂದರೆ ಆ ದಿನ ಮನೆಮಂದಿಯೆಲ್ಲಾ ಮೈಗೆ ಎಳ್ಳು ರಸ ತೊಡೆದು ಸ್ನಾನ ಮಾಡುತ್ತಾರೆ. ನೆರೆಹೊರೆಯವರಿಗೆ, ಬಂಧು ಮಿತ್ರರಿಗೆ ಎಳ್ಳು ಬೆಲ್ಲ ಪ್ರಸಾದ ಹಂಚುತ್ತಾರೆ. 'ಎಳ್ಳು ಬೆಲ್ಲ ತಿಂದು ಒಳ್ಳೊಳ್ಳೆ ಮಾತನಾಡೋಣ' ಎನ್ನುತ್ತಾರೆ. ಸಂಜೆಗೆ ಮಕ್ಕಳ ಪೀಡಾಪರಿಹಾರಕ್ಕೆಂದು ಮನೆಗಳಲ್ಲಿ ಮಕ್ಕಳನ್ನು ಹಸೆಯ ಮೇಲೆ ಕೂರಿಸಿ ಅವರ ತಲೆಯ ಮೇಲೆ ಹಿರಿಯರು ಎಳ್ಳು ಸೂಸಿ ಆಶೀರ್ವದಿಸುತ್ತಾರೆ. ಎಳ್ಳಾರತಿ ಮಾಡುತ್ತಾರೆ. ಹೆಣ್ಣು ಮಕ್ಕಳಿಗಂತೂ ಇದೊಂದು ಸಂಭ್ರಮದ ಹಬ್ಬ

ಮನೆಯಲ್ಲಿ ಹೆಣ್ಣು ಮಕ್ಕಳು ಹೊಸಬಟ್ಟೆ ತೊಟ್ಟು ಎಳ್ಳು ಬೆಲ್ಲ ಕಡಲೇಬೀಜ ಕೊಬ್ಬರಿ ಬೆರಸಿ ತುಂಬಿದ ಕರಂಡವನ್ನು ಎಳ್ಳು ಬೀರಲು ಓಡಾಡುವ ದೃಶ್ಯ ಆಕರ್ಷಕ. ತಟ್ಟೆಯಲ್ಲಿ ಬಾಳೆಹಣ್ಣು, ಕಬ್ಬಿನ ತುಂಡು, ಎಳ್ಳುಬೆಲ್ಲ, ಎಲಚಿ ಹಣ್ಣು, ಅಡಿಕೆ-ಎಲೆ ತುಂಬಿ ಅರಿಸಿನ, ಕುಂಕುಮ, ಹೂಗಳೊಡನೆ ಮುತ್ತೈದೆಯರಿಗೆ ನೀಡುವ ಸಂಭ್ರಮ ಎಲ್ಲೆಲ್ಲೂ ಕಾಣುತ್ತದೆ.

### *ಗೋಪೂಜೆ*

ಮಕರ ಸಂಕ್ರಮಣವು ದನಗಳ ಹಬ್ಬವೂ ಹೌದು. ಆ ದಿನ ರೈತರು ಗೋಪೂಜೆ ನಡೆಸುವುದು ರೂಢಿ. ದನಗಳ ಮೈತೊಳೆದು, ಕೊಂಬುಗಳಿಗೆ ಬಣ್ಣ ಸವರಿ, ಅದರ ಮೈಮೇಲೆ ಸಬರ ಹೊದಿಸಿ ಅಲಂಕಾರಮಾಡಿ ಪೂಜಿಸುತ್ತಾರೆ. ಮೆರವಣಿಗೆಯಲ್ಲಿ ಕೊಂಡೊಯ್ದು ಕಿಚ್ಚು ಹಾಯಿಸುತ್ತಾರೆ; ಅವಕ್ಕೆ ಹುಗ್ಗಿತಿನ್ನಿಸಿ ನಲಿದಾಡುತ್ತಾರೆ.

ಉತ್ತರ ಕರ್ನಾಟದಲ್ಲಿ ಸಂಕ್ರಾಂತಿಯನ್ನು ರೊಟ್ಟಿಹಬ್ಬವಾಗಿ ಆಚರಿಸುತ್ತಾರೆ. ಅಂದು ಅವರು ವಿವಿಧ ಬಗೆಯ ರೊಟ್ಟಿಗಳನ್ನು ತಯಾರಿಸುತ್ತಾರೆ. ಊಟಕ್ಕೆ ಹೋಳಿಗೆ – ತುಪ್ಪವಂತೂ ಇಷ್ಟೇ ಇರುತ್ತದೆ. ಅದು ಸುಗ್ಗಿಯ ಕಾಲವಾದ್ದರಿಂದ ಹೊಸಧಾನ್ಯಗಳಿಂದ ಅಡುಗೆ ತಯಾರಿಸಿ ದೇವರಿಗೆ ನೈವೇದ್ಯಮಾಡಿ ಒಟ್ಟಿಗೇ ಕುಳಿತು ಊಟ ಮಾಡುವ ಪದ್ಧತಿಯುಂಟು. ತಮಿಳುನಾಡಿನಲ್ಲಿ ಇದನ್ನು 'ಪೊಂಗಲ್ ಹಬ್ಬ' ಎನ್ನುತ್ತಾರೆ. ಸಿಹಿ ಮತ್ತು ಖಾರದ ಬೇಳೆ ಅನ್ನವನ್ನು (ಪೊಂಗಲ್) ಮಾಡಿ ದೇವರಿಗೆ ಅರ್ಪಿಸುತ್ತಾರೆ. ಅನಂತರ ಪೊಂಗಲಿನ ಹಬ್ಬದೂಟವನ್ನು ಸವಿಯುತ್ತಾರೆ. ಹೀಗೆ ಮಕರ ಸಂಕ್ರಮಣವು ಜನ ಜೀವನದಲ್ಲಿ ನವೋತ್ಸಾಹ ಚಿಮ್ಮುವಂತೆ ಮಾಡುವ ಹಬ್ಬವಾಗಿದೆ. ★

---

ತ್ರಿವಿಧ ದಾಸೋಹಮೂರ್ತಿ, ಪರಮಪೂಜ್ಯ

**ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಅಮೃತ ಮಹೋತ್ಸವ ಸಮಾರಂಭ**

## ಒಂದು ಮನವಿ

ಆತ್ಮೀಯ ಸದಸ್ಯರೆ,

ಸಂಘದ ೫೦ನೇ ಮಹಾಧಿವೇಶನವು ದಿನಾಂಕ ೧೯-೧೨-೨೦೦೪ರ ಭಾನುವಾರದಂದು ಶ್ರೀಮಠದಲ್ಲಿ ಸಮಾವೇಶ ಗೊಂಡಿತ್ತು. ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದಿವ್ಯಸಾನ್ನಿಧ್ಯ ದಯಪಾಲಿಸಿದ್ದರು. ಸಭೆಯಲ್ಲಿ ಸಂಘವು ಆಯೋಜಿಸಿಕೊಂಡಿರುವ ಸೇವಾ ಯೋಜನೆಗಳನ್ನು ಕುರಿತು ಸವಿವರವಾಗಿ ಚರ್ಚಿಸಲಾಯಿತು. ೯೬ ಕೋಟಿ ರೂಗಳ ಬೃಹತ್ ಯೋಜನೆಯನ್ನು "ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್" ಹಮ್ಮಿಕೊಂಡಿರುವ ವಿಡಿಯೋ ಸಾಕ್ಷ್ಯಚಿತ್ರದೊಡನೆ ಸರ್ವಸದಸ್ಯರ ಗಮನಕ್ಕೆ ತಂದದ್ದು ವಿಶೇಷವಾದುದಾಗಿತ್ತು.

"ಯಾವ ಸಂಸ್ಥೆಗೂ ಇಲ್ಲದ ಮಹಾಭಾಗ್ಯ ಶ್ರೀಮಠಕ್ಕೆ ಹಳೆಯ ವಿದ್ಯಾರ್ಥಿ ಸಂಘದ ರೂಪದಲ್ಲಿದ್ದು ಸೇವಾ ಕೈಂಕರ್ಯದಲ್ಲಿ ಸಹಕರಿಸುತ್ತಿರುವುದು ಸಂತೋಷವನ್ನುಂಟು ಮಾಡುವುದಾಗಿದೆ." – ಎಂದು ಹೃದಯಾರೆ ಆಶೀರ್ವಚನ ನೀಡಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಮಠದ ವಿರಕ್ತಾಶ್ರಮವನ್ನು ಸ್ವೀಕರಿಸಿ ೨೦೦೫ಕ್ಕೆ ೭೫ ವರ್ಷಗಳು ತುಂಬುತ್ತಿರುವ ಶುಭಸಂದರ್ಭವನ್ನು ಕಣ್ಣಾರೆ ನೋಡುವ ಪುಣ್ಯ ನಮ್ಮೆಲ್ಲರದ್ದಾಗಿದೆ. ಪೂಜ್ಯಪಾದರು ೭೫ ವರ್ಷಗಳುದ್ದಕ್ಕೂ ಮಾನವಕಲ್ಯಾಣಕ್ಕಾಗಿ ಜಾತ್ಯಾತೀತ ದೃಷ್ಟಿಯಿಂದ ಶ್ರೀಗಂಧದಂತೆ ತಮ್ಮನ್ನು ಅರ್ಪಿಸಿಕೊಂಡು ಬಂದಿರುವುದು ತಮಗೆ ಗೊತ್ತಿರುವುದೇ ಆಗಿದೆ. ಶ್ರೀಗಳವರ ಮಾತೃವಾತ್ಸಲ್ಯದ ತಂಪುನೆರಳಿನಲ್ಲಿ ನಾವೆಲ್ಲ ಅರಳಿದ್ದೇವೆ ಎಂಬುದನ್ನು ನೆನೆದರೆ ಹೃದಯ ತುಂಬಿ ಬರುತ್ತದೆ. ಬಾಳಿಗೆ ದಾರಿದೀಪವಾದ ಶ್ರೀಗಳವರ ಋಣವನ್ನು ನಾವೆಂದೂ ತೀರಿಸಲಾರೆವು. ಆದರೂ ಕಿಂಚಿತ್ ಪ್ರಮಾಣದಲ್ಲಾದರೂ ಶ್ರೀ ಪೂಜ್ಯಪಾದರ ಋಣವನ್ನು ತೀರಿಸಬೇಕೆಂಬ ಕೃತಜ್ಞತಾಭಾವನೆಯಿಂದ, "ಪ್ಲಾಟಿನಂ ಜ್ಯೂಬಿಲಿ" (ಅಮೃತ ಮಹೋತ್ಸವವನ್ನು) ಆಚರಿಸುವುದರ ಮೂಲಕ ಕೃತಾರ್ಥರಾಗಬೇಕೆಂದು ಸಭೆಯ ಗೊತ್ತುವಳಿಯನ್ನು ಸಂತೋಷದಿಂದ ಸ್ವೀಕರಿಸಲಾಯಿತು. ಸಮಾರಂಭವನ್ನು ೨೦೦೫ರ ಏಪ್ರಿಲ್ ಮೊದಲನೇ ವಾರದಲ್ಲಿ ನಡೆಸಬೇಕೆಂದು ನಿರ್ಣಯಿಸ ಲಾಯಿತು. "ಪ್ಲಾಟಿನಂ ಜ್ಯೂಬಿಲಿ"ಯ ಸವಿನೆನಪಿಗಾಗಿ ವಿದ್ಯಾರ್ಥಿನಿಲಯವನ್ನು ನಿರ್ಮಾಣಮಾಡುವುದೆಂದು ತೀರ್ಮಾನಿಸ ಲಾಯಿತು.

ಈ ಸಂಬಂಧವಾಗಿ ಈಗಾಗಲೇ ನಿರ್ಮಾಣವಾಗುತ್ತಿರುವ ೪೦೦ ವಿದ್ಯಾರ್ಥಿಗಳಿಗೆ ಆಶ್ರಯ ನೀಡುವ ನೆಲ ಅಂತಸ್ತಿನ ಕಟ್ಟಡ ಪೂರ್ಣವಾಗಿದ್ದು ಅದರ ಮೇಲಿನ ಮೊದಲ ಅಂತಸ್ತಿನ ಕಟ್ಟಡವನ್ನು "ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ" ವತಿಯಿಂದ ನಿರ್ಮಿಸಿಕೊಡುವುದರಿಂದ ಇನ್ನೂ ೪೦೦ ವಿದ್ಯಾರ್ಥಿ ಗಳಿಗೆ ಅವಕಾಶ ಕಲ್ಪಿಸಿದಂತಾಗುತ್ತದೆ ಎಂಬ ಸದ್ಭಾವನೆಯಿಂದ ಸುಮಾರು ಅರವತ್ತು (೬೦) ಲಕ್ಷ ರೂ.ಗಳ ಯೋಜನೆಯನ್ನು ಕೈಗೆತ್ತಿಕೊಳ್ಳಲು ಸಭೆ ಸರ್ವಾನುಮತದಿಂದ ಒಪ್ಪಿತು. ಅಲ್ಲದೆ ಜ್ಯೂಬಿಲಿ ಸಮಾರಂಭದ ಒಟ್ಟು ಖರ್ಚನ್ನು ಸಂಘವೇ ವಹಿಸಿ ಕೊಳ್ಳಬೇಕೆಂದು ನಿರ್ಣಯಿಸಲಾಯಿತು. ಈ ಎಲ್ಲಾ ವಿಚಾರಗಳನ್ನು ಮನಗಂಡು ಸಂಘವು ೨೦೦೫ರ ಏಪ್ರಿಲ್‌ನಲ್ಲಿ ಆಯೋಜಿಸಿಕೊಂಡಿರುವ ವಿದ್ಯಾರ್ಥಿನಿಲಯದ ನಿರ್ಮಾಣ ಮತ್ತು ಸಮಾರಂಭದ ಸಲುವಾಗಿ ಪ್ರತಿಯೊಬ್ಬ ಸದಸ್ಯರೂ ೨೫೦೦ ರೂ.ಗಳಿಗೆ ಕಡಿಮೆಯಿಲ್ಲದಂತೆ ತಮ್ಮ ಕಾಣಿಕೆಯನ್ನು "ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಸಿದ್ಧಗಂಗಾ ಮಠ" ತುಮಕೂರು – ಈ ಹೆಸರಿನಲ್ಲಿ ಡಿ.ಡಿ. ರೂಪದಲ್ಲಿ ಅಥವಾ ಚೆಕ್‌ರೂಪದಲ್ಲಿ ಅಥವಾ ನಗದಾಗಿ ಕಾಣಿಕೆಯನ್ನರ್ಪಿಸಬೇಕೆಂದು ತೀರ್ಮಾನಿಸಲಾಯಿತು. ಪ್ಲಾಟಿನಂ ಜ್ಯೂಬಿಲಿ ಮಹೋತ್ಸವಕ್ಕೆ ಕೇವಲ ಮೂರು ತಿಂಗಳ ಕಾಲಾವಕಾಶವಿರುವುದರಿಂದ ಸದಸ್ಯರಾದ ತಾವು ತಮ್ಮ ಕಾಣಿಕೆಯನ್ನು ಒಂದು ಅಥವಾ ಎರಡು ಕಂತಿನಲ್ಲಿ ಅರ್ಪಿಸುವುದರ ಮೂಲಕ ಸಹಕರಿಸಬೇಕೆಂದು ಮನವಿ ಮಾಡುತ್ತಿದ್ದೇನೆ. ತಮ್ಮ ಇಷ್ಟ ಮಿತ್ರರೂ, ಬಂಧು ಬಳಗದವರೂ ಈ ಪುಣ್ಯಕಾರ್ಯದಲ್ಲಿ ಸಕ್ರಿಯವಾಗಿ ಸಹಕರಿಸುವಂತೆ ತಾವು ಸ್ಫೂರ್ತಿ ನೀಡುತ್ತೀರೆಂದು ಆಶಿಸಿದ್ದೇನೆ. ತಮ್ಮ ವಾಗ್ದಾನವನ್ನು ಈ ಮನವಿಯೊಂದಿಗೆ ಲಗತ್ತಿಸಿರುವ "ವಾಗ್ದಾನ ಪತ್ರ" ದಲ್ಲಿ ತುಂಬಿ ಮೊದಲನೇ ಕಂತಿನ ಅಥವಾ ಪೂರ್ಣ ಕಾಣಿಕೆಯನ್ನು ಇದರ ಜೊತೆಗಿರಿಸಿರುವ "ಸ್ವ ವಿಳಾಸ ವಿರುವ ಅಂಚೆ ಲಕೋಟೆ" ಯಲ್ಲಿಟ್ಟು ಕಳಿಸಿಕೊಡುತ್ತೀರೆಂದು ನಂಬಿರುತ್ತೇನೆ.

ವಿಶ್ವಾಸಪೂರ್ವಕ ನಮಸ್ಕಾರಗಳೊಂದಿಗೆ

ತಮ್ಮ ನಂಬುಗೆಯ
ಡಾ|| ಎಂ.ಎನ್. ಚೆನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ
ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ







# ಸಂಕ್ರಾಂತಿ

– ವಿದ್ಯಾವಾಚಸ್ಪತಿ ಕವಿತಾಕೃಷ್ಣ
ಕ್ಯಾತ್ಸಂದ್ರ, ತುಮಕೂರು.
ದೂರವಾಣಿ : 2282125

ಸೂರ್ಯದೇವನು ವಿಶ್ವದ ಆತ್ಮ; ಜಗತ್ತಿನ ಕಣ್ಣು. ಈತನ ಕೃಪೆಯಿಂದಲೆ ಇಳೆ ಬೆಳಗುವುದು. ಮಳೆ ಸುರಿಯುವುದು. ಬೆಳೆ ಬೆಳೆಯುವುದು. ಚೈತನ್ಯ ಮೊಳೆಯುವುದು. ಸೂರ್ಯನು ೧೨ ತಿಂಗಳುಗಳಲ್ಲಿ ೧೨ ರಾಶಿಗಳನ್ನು ಪ್ರವೇಶಿಸುವನು. ಈ ಹನ್ನೆರಡು ತಿಂಗಳನ್ನು ಉತ್ತರ ಆಯನ, ದಕ್ಷಿಯ ಅಯನ ಎಂದು ಎರಡು ಭಾಗವಾಗಿ ವಿಂಗಡಿಸಲಾಗಿದೆ. ಸೂರ್ಯನು ಉತ್ತರಾಯಣ ಕಾಲದಲ್ಲಿ ಮಕರರಾಶಿಯನ್ನು ಪ್ರವೇಶಿಸುವನು. ಇದೊಂದು ದಿನ ಹಬ್ಬವಾಗಿ ರೂಪಗೊಂಡಿದೆ. ಮಕರ ಸಂಕ್ರಾಂತಿ ಅಥವಾ ಸಂಕ್ರಾಂತಿ ಹಬ್ಬವೆಂದೇ ಪ್ರಸಿದ್ಧವಾಗಿದೆ.

ಸಂಕ್ರಾಂತಿ ಭಾರತೀಯರ ಪ್ರಮುಖ ಹಬ್ಬ, ಕೃಷಿಕರಿಗಂತು ದೊಡ್ಡ ಹಬ್ಬ, ಸುಗ್ಗಿಯ ಕಾಲದಲ್ಲಿ ಬರುವ ಹಿಗ್ಗಿನ ಹಬ್ಬ ಇದಾಗಿದೆ. ಸೂರ್ಯ ದಕ್ಷಿಣ ಅಯನದಿಂದ ಉತ್ತರ ಅಯನಕ್ಕೆ ಚಲಿಸುವುದನ್ನು, ಚಲನೆಯಿಂದಾಗುವ ಮಹತ್ವದ ಪರಿವರ್ತನೆಗಳನ್ನು ಗಮನಿಸಿ ಅದನ್ನು ಸಂಕ್ರಾಂತಿ ಎಂದು ಕರೆದು, ಗೌರವಿಸಿದರು. ಋಷಿ ಜೀವನದ ತಳಹದಿಯ ಮೇಲೆ ರೂಪುಗೊಂಡ ನಮ್ಮ ಸಂಸ್ಕೃತಿ ಆ ದಿನವನ್ನು ಪವಿತ್ರ ದಿನವೆಂದು ನಂಬಿತು. ಏಕಕಾಲದಲ್ಲಿ ಸೂರ್ಯ-ಪಶು-ಪಸಲುಗಳ ಪೂಜೆ ಮಾಡಿತು. ಸಂಕ್ರಾಂತಿ ಸೂರ್ಯದೇವನ ಆರಾಧನೆಯೂ ಹೌದು. ದನಕರುಗಳ ಪೂಜಿಸುವ ಹಬ್ಬವೂ ಅಹುದು. ಒಡಲು ತುಂಬುವ ಬೆಳೆಗಳ ಪೂಜಿಸುವ ಹಬ್ಬವೂ ಹೌದು.

ನೇಗಿಲಯೋಗಿಯು ಬೆವರು ಸುರಿಸಿ, ಇಡೀ ವರ್ಷ ದುಡಿದುದಕ್ಕೆ ಪ್ರತಿಫಲವಾಗಿ ಕಣಜ ತುಂಬುವ ಸಮಯದಲ್ಲಿ ಈ ಸಂಕ್ರಾಂತಿ ಹಬ್ಬ ಬರುತ್ತದೆ. ಜನ, ದನ ಈರ್ವರೂ ಸಂತೃಪ್ತಗೊಂಡ ಕಾಲವದು. ಮನೆ ತುಂಬ ಧವಸ ಧಾನ್ಯ ಕಾಳುಕಡ್ಡಿ. ಹಿತ್ತಲಲ್ಲಿ ಎತ್ತರದ ಹುಲ್ಲಿನ ಬಣವೆ. ಜನರು ಅಂದು ಪುಣ್ಯ ಜಲಗಳಲ್ಲಿ ಮಿಂದು ಮಡಿಯಾಗುತ್ತಾರೆ. ಹೊಸಬಟ್ಟೆ ಧರಿಸುತ್ತಾರೆ. ಮನೆಯನ್ನು ಹಿಂದಿನ ದಿನವೇ ಗುಡಿಸಿ, ಸಾರಿಸಿ ಶುಚಿ ಮಾಡಿರುತ್ತಾರೆ. ಮಾರನೆಯ ದಿನ ಅಲಂಕರಿಸುತ್ತಾರೆ. ಹೊಳೆ, ನದಿಗಳ ಸಮೀಪ ಇರುವವರು ಪುಣ್ಯ ಸ್ನಾನ ಮಾಡಿ ಪಾವನರಾದೆವೆಂದು ಭಾವಿಸುತ್ತಾರೆ. ನೆರೆ-ಹೊರೆಯ ಮಂದಿಗೆ, ಬಂಧು ಬಾಂದವರುಗಳಿಗೆ ಪೂಜಾನಂತರ ಎಳ್ಳು ಬೆಲ್ಲ-ಕಬ್ಬು- ಬಾಳೆಹಣ್ಣು ಹಂಚುತ್ತಾರೆ. ಸಕ್ಕರೆ ಅಚ್ಚು ವಿಶೇಷವಾಗಿ ಮಾಡಿಸಿ ಹಿರಿಯರಿಗೆ ಕಿರಿಯರಿಗೆ ಹಂಚುತ್ತಾರೆ. 'ಎಳ್ಳು-ಬೆಲ್ಲ ತಿಂದು ಒಳ್ಳೆಯ ಮಾತಾಡು' ಎಂದು ಹೇಳುತ್ತಾರೆ. ನಡೆ-ನುಡಿಯನ್ನು ಮಡಿ ಮಾಡುವ ಸಂಕೇತವೂ ಇದಾಗಿದೆ.

ರೈತರು ಅಂದು ತಾವು ಮಡಿಯಾಗುವಂತೆಯೇ ದನಕರುಗಳನ್ನೂ ಮೈತೊಳೆದು ಕೊಂಬುಗಳಿಗೆ ಬಣ್ಣ ಬಳಿದಯ ಅಲಂಕರಿಸಿ ಪೂಜಿಸುತ್ತಾರೆ. ನಂತರ ಬೇಯಿಸಿದ ಗೆಣಸು, ಕಡಲೆಕಾಯಿ ಮತ್ತು ಸಿಹಿ ಪೊಂಗಲ್ ಅರ್ಪಿಸುತ್ತಾರೆ. ಹೆಣ್ಣು ಮಕ್ಕಳು ಬಹು ಭಕ್ತಿಯಿಂದ ಗೋಪೂಜೆ ಸಲ್ಲಿಸುತ್ತಾರೆ. ಗಂಡಸರು ಅಲಂಕೃತ ಹಸು, ಕರು, ಹೋರಿಗಳನ್ನು ವಾದ್ಯದೊಂದಿಗೆ ಮೆರವಣಿಗೆಯಲ್ಲಿ ಕೊಂಡೊಯ್ಯುತ್ತಾರೆ. ಉರಿಯುವ ಬೆಂಕಿಯಲ್ಲಿ ಹಾಯಿಸುತ್ತಾರೆ. ಈ ಪದ್ಧತಿಯನ್ನು 'ಅಚ್ಚು ಹಾಯಿಸುವುದು' ಎಂದು ಕರೆಯುತ್ತಾರೆ. ಊರು, ಹಳ್ಳಿಗಳಲ್ಲಿ ಎಲ್ಲರೂ ಈ ಕಿಚ್ಚು ಹಾಯಿಸುವ ನೋಟ ಬಲು ಮನೋಹರವಾಗಿರುತ್ತದೆ. ಸಂಕ್ರಾಂತಿ ಕೃಷಿಕರೊಂದಿಗೆ ಅವಿನಾಭಾವ ಬಾಂಧವ್ಯವನ್ನು ಬೆಸೆದುಕೊಂಡಿದೆ.

ಸಂಕ್ರಾಂತಿ ಹಬ್ಬ ದಕ್ಷಿಣ ಭಾರತದಲ್ಲಿ ವಿಶೇಷವಾಗಿ ಹಾಗೂ ವೈಶಿಷ್ಟ್ಯಪೂರ್ಣವಾಗಿ ಆಚರಿಸಲ್ಪಡುತ್ತದೆ. ಆಂಧ್ರದಲ್ಲಿ ಇದು ಬಹು ದೊಡ್ಡ ಹಬ್ಬವಾಗಿ ಆಚರಿಸಲ್ಪಡುತ್ತದೆ. ಅವರು 'ಪೆದ್ದ ಪಂಗಡ' ಎಂದೇ ಕರೆಯುತ್ತಾರೆ. ತಮಿಳುನಾಡಿನಲ್ಲಿ 'ಪೊಂಗಲ್' ಎಂದು ಕರೆಯುಲ್ಪಡುತ್ತದೆ. ಕರ್ನಾಟಕದಲ್ಲಿ ಸಂಕ್ರಾಂತಿ ಎನಿಸಿದೆ. ಕೇರಳದಲ್ಲೂ ಇದರ ಆಚರಣೆ ಉಂಟು. ಇದು ಕುಣಿತ, ಹಾಡುಗಳೊಂದಿಗೆ ನಡೆವ ಮೂರು ದಿನದ ಸಾಂಪ್ರದಾಯಿಕ ಹಬ್ಬವಾಗಿದೆ. ಆಂಧ್ರ ಪ್ರದೇಶದಲ್ಲಿ 'ಗೊಬ್ಬಿ ಪಾಟಲು' (ಗೋಪಿಹಾಡು) ಎಂದು ಕರೆಯುತ್ತಾರೆ. ಅಂದು ಪುಟ್ಟ ಮಕ್ಕಳಿಗೆ ಆರತಿ ಎತ್ತುವ ಸಂಪ್ರದಾಯವೂ ಕೂಡ ಆಚರಣೆಯಲ್ಲಿದೆ. ಭಗವಾನ್ ಕೃಷ್ಣನು ತನ್ನ ಕಾಲದಲ್ಲಿ ಆಚರಣೆಯಲ್ಲಿದ್ದ ಇಂದ್ರಪೂಜೆಯನ್ನು ನಿಲ್ಲಿಸಿ, ಗೋಪೂಜೆಗೆ ನಾಂದಿ ಹಾಡಿದನಂತೆ, ಗೋವು ಮಹತ್ತರವಾದ ಸಂಪತ್ತಾಗಿ ಪರಿಣಮಿಸಿತು. ಅಂದು ಮೊದಲ ಪೂಜೆಯನ್ನು ಶ್ರೀಕೃಷ್ಣನೇ ಮಾಡಿದನಂತೆ. ಕೃಷ್ಣನು ಗೋವಳರ ಆಚರಣೆಯಲ್ಲಿ ಕ್ರಾಂತಿಕಾರಕ ಬದಲಾವಣೆ ಮಾಡಿ, ಸಂಕ್ರಾಂತಿ ಹಬ್ಬವಾಗಿ ರೂಪಿಸಿದನು. ಹೀಗಾಗಿ ಸಂಕ್ರಾಂತಿಗೆ ಪ್ರಾಚೀನ ಐತಿಹ್ಯವೇ ಇದೆ.

*ಸುಗ್ಗಿಯ ಕಾಲದಿ ಹಿಗ್ಗನು ತಂದಿತು ಸಿರಿವಂತಿಕೆಯ ಸಂಕ್ರಾಂತಿ*
*ಜನಮನ ತಣಿಸಿ ಹೃನ್ಮನ ಅರಳಿಸಿ ತಂದಿತು ಅದು ಸುಖಶಾಂತಿ*
*ಎಳ್ಳು-ಬೆಲ್ಲ ಕಡಲೆ-ಕಬ್ಬು ಪೊಂಗಲ್ ಉಣಿಸಿದ ಸಂಕ್ರಮಣ*
*ಸೂರ್ಯನ ಪೂಜಿಸಿ ಗೋವಿಗೆ ನಮಿಸುವ ಸಂಸ್ಕೃತಿ ಹಿರಿಮೆ ಅನುಕರಣ*

ಕವಿ ಬಣ್ಣಿಸಿದಂತೆ ಸಂಕ್ರಾಂತಿಯ ಸುಗ್ಗಿಕಾಲದ ಹಿಗ್ಗನ್ನು ನಾಡಿಗೆಲ್ಲಾ ಚೆಲ್ಲಿತು. ಮನೆಯ ಮಡಿಕೆ, ಕುಡಿಕೆ, ಕಣಜ ಧವಸ ಧಾನ್ಯಗಳ ಸಿರಿಯಿಂದ ತುಂಬಿ ಹೋದವು. ಜನ ಮೈಮನ ಅರಳಿ ತಣಿಯಿತು. ಮನೆತುಂಬ ಸುಖ-ಶಾಂತಿಯು ತುಂಬಿತು. ಎಳ್ಳು-ಬೆಲ್ಲ-ಕಡಲೆ-ಕಬ್ಬು ಸಂಗಮಗೊಂಡವು. ಪೊಂಗಲ್ ಘಮಘಮಿಸಿತು. ಸೂರ್ಯನ ಪೂಜೆಯೊಂದಿಗೆ ರೈತರ ಪಾಲಿನ ಪ್ರತ್ಯೇಕ ದೇವರಾದ ದನಕರು ರಾಸುಗಳ ಪೂಜೆಯೂ ನಡೆಯಿತು. ಸಂಕ್ರಾಂತಿ ನಮ್ಮ ಜನ ಅಪೂರ್ವ ಸಂಸ್ಕೃತಿ ಪರಂಪರೆಯನ್ನು ಅನುರಣಿಸಿತು. ★

# ನಮ್ಮ ಪ್ರಜಾಪ್ರಭುತ್ವ ಎತ್ತ ಸಾಗಿದೆ?

– ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ,
ಭಾಷಾಂತರ ನಿರ್ದೇಶನಾಲಯ,
ಕಾವೇರಿ ಭವನ ಎಫ್ ಬ್ಲಾಕ್,
ಬೆಂಗಳೂರು – ೫೬೦ ೦೦೯.

ಪ್ರಜಾಸತ್ತೆಯನ್ನು ಒಪ್ಪಿಕೊಂಡ ವಿಶ್ವದ ಕೆಲವೇ ಬೃಹತ್ ರಾಷ್ಟ್ರಗಳ ಪೈಕಿ ಭಾರತವೂ ಒಂದು. ಇದು ನಮ್ಮ ದೇಶದ ಹೆಗ್ಗಳಿಕೆಯೆಂದು ಈಗಲೂ ಬೀಗುತ್ತಿದ್ದೇವೆ. ಆದರೆ, ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಪ್ರಜಾತಂತ್ರವನ್ನು ಅಪ್ಪಿಕೊಂಡು ಈಗ ಅರ್ಧ ಶತಮಾನ ಪೂರೈಸಿದ ನಮ್ಮ ದೇಶ ಎಷ್ಟರ ಮಟ್ಟಿಗೆ ಸಾಧನೆಗೈದಿದೆ ಎಂಬ ಪ್ರಶ್ನೆ ಹಾಕಿಕೊಂಡರೆ ನಮಗೆ ನಾವೇ ನಾಚಿಕೆಪಡಬೇಕಾಗುತ್ತದೆ. ಸ್ವಾತಂತ್ರ್ಯದ 'ಅರ್ಧ' ಶೇಕಡಾ ಎಷ್ಟು ಮಂದಿಗೆ ಇಲ್ಲಿ ದಕ್ಕಿದೆಯೆಂದು ಅವಲೋಕಿಸಿದರೆ ಖಂಡಿತಾ ಗಾಢವಾದ ವಿಷಾಧವೇ ಆವರಸೀತು. ಯಾಕೆ ಹೀಗಾಯಿತು? ಅದಕ್ಕೆ ಯಾರು ಕಾರಣ? ಇತ್ಯಾದಿ ಪ್ರಶ್ನೆಗಳನ್ನು ಹಾಕಿಕೊಂಡು ಆತ್ಮವಿಮರ್ಶೆ ಮಾಡಿಕೊಳ್ಳಬೇಕಾದ ಜವಾಬ್ದಾರಿ ಈಗ ತುಂಬಾ ಇದೆ.

'ಜನರಿಂದ ಜನರಿಗಾಗಿ ಜನರಿಗೋಸ್ಕರ' ಎಂದೆನ್ನಿಸಿದ ಪ್ರಜಾತಂತ್ರವನ್ನು ಅನುಭವಿಸಲು ದೇಶದ ಭೂಮಿಕೆ ಆಗ ಸಿದ್ಧವಾಗಿತ್ತೆ ಎಂದು ಮತ್ತದೇ ಮಾತುಗಳಲ್ಲಿ ಚರ್ಚಿಸಿದರೆ ಚರ್ವಿತ ಚರ್ವಣವಾದೀತು. ಗಾಂಧೀಯುಗದ ಮಂದಿಯ ಆ ತ್ಯಾಗ-ಬಲಿದಾನಗಳಿಂದ ಕೂಡ ಮಾಡಿದ ಸ್ವರಾಜ್ಯದ ಆಶೋತ್ತರಗಳನ್ನು ಈಡೇರಸಿಕೊಳ್ಳುವಲ್ಲಿ ಇಂದು ನಾವೆಲ್ಲಿ ತಪ್ಪಿದ್ದೇವೆ ಎನ್ನುವುದಷ್ಟೇ ನಮ್ಮ ಮುಂದಿರುವ ಪ್ರಶ್ನೆ. ತತ್ವರಹಿತ ರಾಜಕಾರಣಿಗಳು ಅಪ್ರಬುದ್ಧ ಮತದಾರರೂ ಹೇರಳವಾಗಿರುವ ನಾಡಿನಲ್ಲಿ ಪ್ರಜಾಸತ್ತೆಯ ಯಶಸ್ಸನ್ನು ನೂರಕ್ಕೆ ನೂರು ನಿರೀಕ್ಷಿಸಲಾಗದು ಎಂಬ ಅನಿವಾರ್ಯತೆಯನ್ನು ಒಪ್ಪಿಕೊಂಡೇ ಈಗ ಮುಂದುವರಿಯಬೇಕಾಗಿದೆ.

*ಆದರ್ಶ ರಾಜ್ಯ*

ಗಾಂಧೀಜಿ ಕನ್ಯಾಕುಮಾರಿಯಿಂದ ಕಾಶ್ಮೀರದ ತನಕ ಪಾದರಸದಂತೆ ಹರಿದಾಡಿ, ಈ ನೆಲದ ನಾಡಿಯನ್ನು ಚೆನ್ನಾಗಿ ಬಲ್ಲವರಾಗಿದ್ದರು. ಇಪ್ಪತ್ತನೆಯ ಶತಮಾನದ ಆದಿಯಲ್ಲಿಯೇ 'ಹಿಂದ್ ಸ್ವರಾಜ್' ಪುಸ್ತಕ ಬರೆದು ಅದರಲ್ಲಿ ಗ್ರಾಮರಾಜ್ಯದ ಕನಸು ಕಂಡಂತೆ ಹಳ್ಳಿಗಳ ಅಭಿವೃದ್ಧಿ ಕುರಿತಂತೆ ಸಾಕಷ್ಟು ಚರ್ಚಿಸಿದ್ದರು. ಇಲ್ಲಿರುವ ವಿವಿಧ ಜನಾಂಗ, ಭಾಷೆ, ಸಂಸ್ಕೃತಿಗಳನ್ನು ಮನಗಂಡವರಾಗಿ ಮಾತೃಭಾಷೆಯಲ್ಲಿ ಶಿಕ್ಷಣ, ಗುಡಿ ಕೈಗಾರಿಕೆಗಳ ಅಭಿವೃದ್ಧಿ ಆ ಮೂಲಕ ದೇಶವಾಸಿಗಳೆಲ್ಲರ ಜೀವನಮಟ್ಟವನ್ನು ಎತ್ತರಿಸುವ 'ಆದರ್ಶರಾಜ್ಯ' ಅವರ ನಿಲುವಾಗಿತ್ತು.

ಸ್ವಾತಂತ್ರ್ಯದ ಹೊಸ್ತಿಲಲ್ಲಿ (೧೯೪೫) ಗಾಂಧೀಜಿ ಭಾವೀ ಪ್ರಧಾನಿ ನೆಹರೂ ಅವರಿಗೆ ಪತ್ರ ಬರೆದು ತಿಳಿಸಿದ್ದ ಸಂಗತಿಗಳು ಇಂದಿಗೂ ಮನನೀಯವಾಗಿವೆ : ''ಭಾರತವು ನಿಜವಾದ ಸ್ವಾತಂತ್ರ್ಯವನ್ನು ಗಳಿಸಬೇಕಾದರೆ ಜನರೆಲ್ಲ ಇಂದಲ್ಲ ನಾಳೆ ಗ್ರಾಮಗಳಲ್ಲಿ ಬದುಕಬೇಕಲ್ಲದೆ ಪಟ್ಟಣಗಳಲ್ಲಲ್ಲ, ಗುಡಿಸಲುಗಳಲ್ಲಲ್ಲದೆ ಅರಮನೆಗಳಲ್ಲಲ್ಲ ಎಂಬ ಸತ್ಯವನ್ನು ಮನಗಾಣಬೇಕು. .... ನನ್ನ ಕನಸಿನ ಹಳ್ಳಿಗಳ ಚಿತ್ರವನ್ನು ಮನದಲ್ಲಿನ್ನೂ ಸ್ಪಷ್ಟವಾಗಿದೆ. ನನ್ನ 'ಆದರ್ಶ ಗ್ರಾಮ' ಬುದ್ಧಿವಂತ ಜನರಿಂದ ತುಂಬಿರುತ್ತದೆ. ಅವರು ಪ್ರಾಣಿಗಳಂತೆ ಕೊಚಳೆ ಮತ್ತು ಅಜ್ಞಾನದಲ್ಲಿ ಬದುಕುವುದಿಲ್ಲ. ಅಲ್ಲಿ ಸ್ತ್ರಿ-ಪುರುಷರು ಮುಕ್ತವಾಗಿ ಬದುಕುತ್ತಾರೆ. ಜಗತ್ತಿನ ಯಾವ ನಿಲುವಿನ ವಿರುದ್ಧವೂ ದನಿಯತ್ತುವ ಸಾಮರ್ಥ್ಯ ಅವರಿಗಿರುತ್ತದೆ. ಅಲ್ಲಿ ಪ್ಲೇಗ್, ಕಾಲರಾ ಅಥವಾ ಸಿಡುಬಿನ ಆತಂಕವಿರದು. ಯಾರೊಬ್ಬರು ಸೋಮಾರಿಯಾಗಿ ಇರುವುದಿಲ್ಲ. ಯಾರೊಬ್ಬರೂ ಭೋಗದಲ್ಲಿ ಮೈಮರೆತಿರುವುದಿಲ್ಲ. ಅಲ್ಲಿ ಪ್ರತಿಯೊಬ್ಬರೂ ತಮ್ಮ ಪಾಲಿನ ದುಡಿಮೆಯನ್ನು ಸಲ್ಲಿಸಬೇಕು.

''.... ಜಗತ್ತು ಇಂದು ಅಡ್ಡ ದಾರಿ ಹಿಡಿದಿದ್ದರೆ ಅದಕ್ಕೆ ನಾವು ಧೃತಿಗೆಡಬಾರದು. ಭಾರತವೂ ಸಹ ಅದರ ಜ್ವಾಲೆಯ ಕುಡಿಗೆ ಆಕರ್ಷಿತವಾಗಿ ಅದನ್ನು ಸುತ್ತುತ್ತಾ ತನ್ನನ್ನೇ ಸುಟ್ಟುಕೊಳ್ಳುವ ಪತಂಗದ ರೀತಿಯಲ್ಲಿ ಅದೇ ದಾರಿಯನ್ನು ಹಿಡಿಯಬಹುದು. ಆದರೆ, ಅಂಥ ದುರಂತದಿಂದ ಭಾರತವನ್ನು ಆ ಮೂಲಕ ಇಡೀ ಜಗತ್ತನ್ನು ರಕ್ಷಿಸಲು ನನ್ನ ಕೊನೆಯುಸಿರನವರೆಗೂ ಪ್ರಯತ್ನಿಸುವುದು ನನ್ನ ಕರ್ತವ್ಯ.''

ಅದಕ್ಕೆ ನೆಹರೂ ಚಮತ್ಕಾರಿಕ ಉತ್ತರ ನೋಡಿರಿ'' ...ನಾನು 'ಹಿಂದ್ ಸ್ವರಾಜ್' ಓದಿದ್ದು ಅನೇಕ ವರ್ಷಗಳ ಹಿಂದೆ ನನ್ನ ಮನಸ್ಸಿನಲ್ಲಿ ಅದರ ಅಸ್ಪಷ್ಟ ಚಿತ್ರವಿದೆ. ಇಪ್ಪತ್ತು ವರ್ಷ ಅಥವಾ





ಅದಕ್ಕಿಂತ ಹಿಂದೆ ಓದಿದಾಗಲೂ ಅದು ಅವಾಸ್ತವವೆಂದು ನನಗೆ ಅನ್ನಿಸಿತ್ತು. ಆ ನಂತರದ ನಿಮ್ಮ ಭಾಷಣ, ಬರವಣಿಗೆಯಲ್ಲಿ ಅವು ನಿಮ್ಮ ಹಳೆಯ ನಿಲುವಿನಿಂದ ಮುಂದುವರೆದು ಆಧುನಿಕ ಪ್ರವೃತ್ತಿಗಳನ್ನು ಅಭಿಮಾನದಿಂದ ನೋಡಿರುವುದನ್ನು ಗಮನಿಸಿದ್ದೇನೆ. ಆದರೆ, ನಿಮ್ಮ ಹಳೆಯ ಚಿತ್ರವೇ ಮನದಲ್ಲಿ ದೃಢವಾಗಿದೆಯೆಂದು ಬರೆದಾಗ ಅಚ್ಚರಿಯಾಯಿತು. ...ಪ್ರಸ್ತುತ ಸಂದರ್ಭದಲ್ಲಿ ಕಾರ್ಯರೂಪಕ್ಕೆ ತರಲಾಗದ, ಜನರ ಮನಸ್ಥಿತಿಯಲ್ಲಿ ಗೊಂದಲ ಮಾತ್ರ ಸೃಷ್ಟಿಸುವ ಇಂಥ ವಿಷಯಗಳ ಬಗ್ಗೆ ಚರ್ಚೆ ನಡೆಸುತ್ತ ಕಾಂಗ್ರೆಸ್ ಕಾಲಹರಣ ಮಾಡಬಾರದೆಂದು ನನ್ನ ಅಭಿಪ್ರಾಯ. ನೀವು 'ಹಿಂದ್ ಸ್ವರಾಜ್' ಬರೆದು ೩೮ ವರ್ಷಗಳಾದವು. ಅಲ್ಲಿಂದೀಚೆಗೆ ಜಗತ್ತು ಸಂಪೂರ್ಣ ಬದಲಾಗಿದೆ. ಬಹುಶಃ ಅಡ್ಡದಾರಿ ಹಿಡಿದಿರಬಹುದು. ... ಜಗತ್ತು ಆತ್ಮಹತ್ಯೆಯೆಡೆಗೆ ಹೋಗುತ್ತಿದೆ ಎಂಬ ನಿಮ್ಮ ಮಾತು ನಿಜ. ನನಗೂ ಹಾಗೆನಿಸಿದೆ. ಆದರೆ ಈ ದುಷ್ಟತನವನ್ನು ಹೋಗಲಾಡಿಸಿ ಹಿಂದಿನಂತೆ ಒಳ್ಳೆಯದನ್ನು ಉಳಿಸಿಕೊಳ್ಳುವುದೇ ನಮ್ಮ ಮುಂದಿರುವ ಸಮಸ್ಯೆ''.

ನಿರೀಕ್ಷಿಸಿದ್ದಂತೆಯೇ ಪ್ರಥಮ ಪ್ರಧಾನ ಮಂತ್ರಿಯಾಗಿ ಸರ್ಕಾರದ ಚುಕ್ಕಾಣಿ ಹಿಡಿದ ನೆಹರೂ ಅದನ್ನು ಹೀಗೆ ನಯವಾಗಿ ನಿರಾಕರಿಸುತ್ತ ಬಂದಿದ್ದರೆಂಬುದನ್ನು ಇತಿಹಾಸವೇ ಹೇಳುತ್ತದೆ. ಗಾಂಧೀಜಿಯವರ ದೂರ ದೃಷ್ಟಿಯಲ್ಲಿ ಯಾವುದು ಬೇಡವಾಗಿತ್ತೋ ಅದನ್ನೇ ದೇಶದಲ್ಲಿ ನಿಧಾನವಾಗಿ ಅಳವಡಿಸಿಕೊಳ್ಳುತ್ತ ಬರಲಾಯಿತು. ಇಂಗ್ಲೀಷ್ ಶಿಕ್ಷಣ ಪದ್ಧತಿ, ಯಾಂತ್ರೀಕೃತ ಬೃಹತ್ ಕೈಗಾರಿಕೋದ್ಯಮಗಳಿಗೆ ವಿಪುಲ ಅವಕಾಶ ಕೊಟ್ಟಂತೆ ದೇಶದ ಮೂಲ ಕಸುಬಾದ ಕೃಷಿಗೆ ನೆಪಮಾತ್ರ, ಬೆಂಬಲ ನೀಡಿಕೊಂಡು ಬರಲಾಯಿತು. ಹೀಗಾಗಿ, ಸಾಕಷ್ಟು ನೈಸರ್ಗಿಕ ಸಂಪನ್ಮೂಲಗಳಿದ್ದೂ ಅವುಗಳನ್ನು ಸಮರ್ಥವಾಗಿ ಬಳಸಿಕೊಳ್ಳದ ಪ್ರಯುಕ್ತ ಈಗಲೂ ದೇಶ 'ಬಡವರು ವಾಸಿಸುವ ಶ್ರೀಮಂತ ರಾಷ್ಟ್ರ' ವಾಗೇ ಉಳಿಯಿತು. ಸುದೀರ್ಘವಾಗೇ ಆಳಿದ ಕಾಂಗ್ರೆಸ್ ಸರ್ಕಾರದ ಪ್ರಜಾತಂತ್ರದ ಹೆಸರಿನಲ್ಲಿ ಸಮಾಜವಾದವನ್ನು ತುಸು ಅನುಸರಿಸಿದಂತೆ ಮಾಡಿದರೂ – ಅನುಷ್ಠಾನದಲ್ಲಿ ನಿರೀಕ್ಷಿತ ಫಲ ಕಾಣದ ಆರ್ಥಿಕ ಅಸಮಾನತೆ, ಸಾಮಾಜಿಕ ನ್ಯಾಯಗಳು ಹಾಗಾಗೇ ಉಳಿದವು. ದೇಶದ ಬೆನ್ನುಲುಬಾದದ ರೈತನ ದುಃಸ್ಥಿತಿಯನ್ನು ಕುರಿತಂತೆ ಕುವೆಂಪು ಅವರ ಕವನದ ಸಾಲುಗಳನ್ನು ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ.

*ಕರಿಯರರೊ ಬಿಳಿಯರರೊ ಯಾರದಾದರೆ ಏನು?*
*ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ !*
*ವಿಜಯನಗರವೊ? ಮೊಗಲರಾಳ್ವಿಕೆಯೊ? ಇಂಗ್ಲೀಷರೋ?*
*ಎಲ್ಲರೂ ಜಿಗಣಿಗಳೇ ನನ್ನ ನೆತ್ತರಿಗೆ*
*ಕತ್ತಿ ಪರದೇಶಿಯಾದರೆ ಮಾತ್ರ ನೋವೆ?*
*ನಮ್ಮವರೆ ಹದಹಾಕಿ ತಿವಿದರದು ಹೂವೆ?*

*ಭ್ರಷ್ಟಾಚಾರ*

ನಮ್ಮ ದೇಶದ ಎಲ್ಲ ರಂಗಗಳಲ್ಲೂ ಕೈಯಿಕ್ಕಿರುವ ಭ್ರಷ್ಟತೆಯ ಬಗ್ಗೆ ನೆನೆದರೆ ಅಸಹ್ಯವಾಗುತ್ತದೆ. ಹಿಂದೆ ಮಹಾರಾಷ್ಟ್ರದ ರಾಜ್ಯಪಾಲರೂ ಆಗಿದ್ದ ಆಂಧ್ರದ ರಾಜಕಾರಣಿ ಶ್ರೀಪ್ರಕಾಶಂ ಹೇಳುತ್ತಿದ್ದ ಮಾತು – ''ನಾನು ಲಂಚತೆಗೆದುಕೊಳ್ಳುವುದಿಲ್ಲವೆಂದು ಬೇಕಾದರೆ ಪ್ರತಿಜ್ಞೆ ಮಾಡುತ್ತೇನೆ. ಆದರೆ, ಲಂಚಕೊಡದೆ ಇರುತ್ತೇನೆ ಎಂದ ಹೇಳಲಾರೆ''. ದೇಶದಲ್ಲಿ ಇಷ್ಟೊಂದು ಭ್ರಷ್ಟತೆ ತಾಂಡವವಾಡುತ್ತಿರುವಾಗ ಇದರ ದುರಸ್ತಿ ಹೇಗೆ? ಎಲ್ಲಿಂದ, ಯಾರಿಂದ ಮೊದಲು ಶುರು ಮಾಡಬೇಕೆಂದು ಯೋಚಿಸಬೇಕಾಗುತ್ತದೆ. ಲಂಚ ತಿನ್ನುವವರನ್ನು ಸಾರ್ವಜನಿಕರೆ ಹಿಡಿದು ಬಡಿಯುವಂತೆ ಮಂತ್ರಿಯೊಬ್ಬರು ಕರೆಕೊಟ್ಟಿದ್ದರು. ವಾಸ್ತವವಾಗಿ ಯಾರನ್ನು ಯಾರೂ ಇದುವರೆವಿಗೆ ಬಡಿಯಲಿಲ್ಲ. ಕೊಡುವವರೇ ಧಾರಾಳವಾಗಿ ಇರುವಾಗ ತೆಗೆದುಕೊಳ್ಳುವವರಿಗೇನು ಬರವೇ? ಇದು ಪರಿಸ್ಥಿತಿ.

ಏನೆಲ್ಲಾ ಹೊಟ್ಟೆಯಲ್ಲಿ ಹಾಕಿಕೊಂಡು ಶುರುವಿನಲ್ಲಿ ಹೇಳಿದ್ದಂತೆ – ಏನೋ ಆದರೂ ಪ್ರಜಾಪ್ರಭುತ್ತ ಒಂದು ಆದರ್ಶ. ಅಂದರೆ, ಅದು ಮಾನವೀಯ ನೆಲೆಯಲ್ಲಿ ಸ್ವಾತಂತ್ರ್ಯ, ಸಮಾನತೆ, ಸಾಮಾಜಿಕ/ಆರ್ಥಿಕ ನ್ಯಾಯಗಳನ್ನು ಮಡಿಲಲ್ಲಿಟ್ಟುಕೊಂಡು ಬಡಿದಾಡುವ ಒಂದು ಚಳುವಳಿಯೂ ಹೌದು. ವಾಸ್ತವವಾಗಿ ಆ ಉದಾತ್ತ ಪರಿಕಲ್ಪನೆಗಳು ಕಾಲಕ್ರಮೇಣ ಅಳಿಸುತ್ತ ಹೋಗಿ, ಕೇವಲ ಅಧಿಕಾರ ಮತ್ತು ಭ್ರಷ್ಟತೆಗಾಗಿ ನಡೆಸುವ ರಾಜಕೀಯ ದೊಂಬರಾಟ ಆಗಿ, ಜನರನ್ನು ಜಾಣತನದಿಂದ ಶೋಷಿಸುವ ಮಟ್ಟ ತಲುಪುತ್ತಿರುವುದು ಇಂದಿನ ನಮ್ಮ ದೇಶದ ಪ್ರಜಾತಂತ್ರದ ಅವಸ್ಥೆಯಾಗಿದೆ. ಇದೇ ಪರಿಸ್ಥಿತಿ ಮುಂದುವರೆದದ್ದರೆ, ರೋಸಿ ಹೋದ ಜನ ಸಿನಿಕರಾಗಿಬಿಡುತ್ತಾರೆ; ಇಲ್ಲಾ ತಾವೂ ಭ್ರಷ್ಟವ್ಯವಸ್ಥೆಯ ಒಂದು ಅಂಗವಾದಂತಾಗಿ ಪರಿಸ್ಥಿತಿಯ ದುರ್ಲಾಭ ಪಡೆಯಲು ಮುಂದಾಗುತ್ತಾರೆ.

*ಪ್ರಜಾಪ್ರಭುತ್ವದ ಗುರಿ*

ಜಾಗತೀಕರಣ ಮೆಚ್ಚಿದ ಇವತ್ತಿನ ಸಂಕ್ರಮಣ ಕಾಲಘಟ್ಟದಲ್ಲಿ ನಿಂತು ನಮ್ಮ ದೇಶದ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಕುರಿತು ಗಂಭೀರವಾಗಿ ಯೋಚಿಸಬೇಕಾದದ್ದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಅಹಿಂಸೆಯಿಂದ ಪಡೆದ ದೇಶದ ಸ್ವಾತಂತ್ರ್ಯವನ್ನು ಅಹಿಂಸೆಯಿಂದಲೇ ಕಾಪಾಡಿಕೊಳ್ಳುತ್ತ ದೇಶದ ಪ್ರತಿಯೊಬ್ಬ ಪ್ರಜೆಗೂ ಅದರ ಫಲವಂತಿಕೆ ಮುಟ್ಟುವಂತೆ ಮಾಡುವುದೇ ಪ್ರಜಾಪ್ರಭುತ್ವದ ಗುರಿಯಾಗಿದೆ ಎಂಬುದನ್ನು ನಾವು ಮರೆಯುವಂತಿಲ್ಲ. ಆದರೆ ಆರ್ಥಿಕ ಉದಾರೀಕರಣದಿಂದಾಗಿ ಹೊಸ ಸವಾಲುಗಳನ್ನು ಎದುರಿಸಬೇಕಾಗಿ ಬಂದ ದೇಶದ ಯುವ ಜನಾಂಗದ ಮುಂದೆ ಭವಿಷ್ಯ ರೂಪಿಸಿಕೊಳ್ಳುವಲ್ಲಿ ಭಾರೀ ಕ್ಲಿಷ್ಟಕರ ಪರಿಸ್ಥಿತಿಯಿರುವುದ

*ಕಾಯದ ಕರ್ಮವ ಕೆಡಿಸಿ ಜೀವನ ಭಾವವ ಭೇದಿಸಿ*
*ತದ್ರೂಪವ ತೋರಿದಾತ ಜ್ಞಾನಗುರು ಆತ ಪರಮಪ್ರಕಾಶ*
*ಈಶಾನ್ಯ ಮೂರ್ತಿ ಮಲ್ಲಿಕಾರ್ಜುನ ಲಿಂಗವು ತಾನೆ'*

**ಈ** ಮೇಲಿನ ಎಲ್ಲ ವಚನಗಳು ಒಬ್ಬ ವ್ಯಕ್ತಿ ಪರಿಪೂರ್ಣನಾಗಬೇಕಾದರೆ, ಮನದಲ್ಲಿರುವ ಕತ್ತಲೆಯ ಕಳೆದು ಸುಜ್ಞಾನದ ಜ್ಯೋತಿ ಬೆಳಗಬೇಕಾದರೆ ಗುರುವಿನ ಮಾರ್ಗದರ್ಶನ, ಅನುಗ್ರಹ ಬೇಕು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಶಿಷ್ಯ ಕಲ್ಲಾದರೆ, ಗುರು ಕಲ್ಲನ್ನು ಕಡೆದು ಒಂದು ಸುಂದರ ಮೂರ್ತಿಯನ್ನಾಗಿ ಮಾಡುವ ಶ್ರೇಷ್ಠ ಶಿಲ್ಪಿಯಾಗುತ್ತಾನೆ, ಕಲಾವಿದನಾಗುತ್ತಾನೆ. ಕಲ್ಲಿಗೆ ಜೀವ ತುಂಬಿ ದೈವತ್ವ ಬರಬೇಕಾದರೆ ಅಥವಾ ಅದಕ್ಕೆ ಒಂದು ರೂಪ ಕೊಟ್ಟಾಗ ಬೆಲೆ ಬರುತ್ತದೆ, ಮಹತ್ವ ಬರುತ್ತದೆ.

ದೇವರದಾಸಿಮಯ್ಯ ತನ್ನ ವಚನವೊಂದರಲ್ಲಿ ದೇಹದೊಳಗಿನ ಸೂರ್ಯನಿಗೆ ಗುರುವನ್ನು ಹೋಲಿಸಿದ್ದಾನೆ *''ಘಟದೊಳಗೆ ತೋರುವ ಸೂರ್ಯನಂತೆ, ಸರ್ವರಲ್ಲಿ ಶಿವನ ಚೈತನ್ಯವಿಪ್ಪುದು. ಇದ್ದರೇನು! ಸರ್ವರಿಗೆ ಸಾಧ್ಯವಲ್ಲ. ಮುಟ್ಟಿ ಮುಟ್ಟದು, ಅದ ಕೂಡುವರೆ ಗುರುವಿನಿಂದಲ್ಲದಾಗದು ಕಾಣಾ ರಾಮನಾಥಾ''* ಎಂದರೆ, ಬಸವಣ್ಣನವರು :

*''ಕಲ್ಲೊಳಗೆ ಹೊನ್ನುಂಟು, ಉದಕದೊಳಗೆ ಅಗ್ನಿಯುಂಟು;*
*ಹಾಲೊಳಗೆ ತುಪ್ಪವುಂಟು, ಅಂತರ್ಯಾಮಿಯಲ್ಲಿ ಶಿವನಿಹನು*
*ಇದೇನು ಕತ್ತಲೆ ಕಾಣಬಾರದು ತೋರಬಲ್ಲ ಗುರು ಸುಳಿಯನು*
*ಕೂಡಲಸಂಗಮದೇವಾ''*

ಎಂದು ಗುರುವಿನ ಮಹತ್ವವನ್ನು ಬಣ್ಣಿಸಿದ್ದಾನೆ.

ಅನುಭಾವಿ ಅಲ್ಲಮಪ್ರಭು ಗುರುಪಾದವ ಹಿಡಿದರೆ ಶಿಷ್ಯನು ಅರಿವಿನ ಆಗರವಾಗುತ್ತಾನೆ ಎಂದಿದ್ದಾರೆ. ಅವರ ಒಂದು ವಚನದಲ್ಲಿ

*''ಕಂಡುದ ಹಿಡಿಯಲೊಲ್ಲದೆ, ಕಾಣದುದನರಸಿ ಹಿಡಿದಿಹೆನೆಂದು*
*ಸಿಕ್ಕಿದೆಂಬ ಬಳಲಿಕೆಯ ನೋಡಾ! ಕಂಡುದನೆ ಕಂಡು,*
*ಗುರುಪಾದವ ಹಿಡಿದಲ್ಲಿ, ಕಾಣದುದ ಕಾಣಬಹುದು ಕಾಣಾ*
*ಗೊಹೇಶ್ವರಾ!''*

**ಗು**ರುವಿನಿಂದ ದೊರಕದ ವಿದ್ಯೆ ವಿದ್ಯೆಯೇ ಅಲ್ಲ ಎಂದು ಹೇಳಿದ ಅಲ್ಲಮಪ್ರಭು ಗುರುವಿನ ಹಸ್ತದೊಳಗಿಪ್ಪ ಶಿಷ್ಯ ಅಪ್ಪಟ ಚಿನ್ನವೆಂದಿದ್ದಾರೆ.

*'ಜ್ಯೋತಿಯೊಳಗಣ ಕರ್ಪೂರಕ್ಕೆ,*
*ಅಪ್ಪುವಿನ ಕೈಯಲ್ಲಿಪ್ಪ ಉಪ್ಪಿಂಗೆ,*
*ಶ್ರೀ ಗುರುವಿನ ಹಸ್ತದೊಳಗಿಪ್ಪ ಶಿಷ್ಯಂಗೆ,*
*ಈ ಮೂರಕ್ಕೆಯೂ ಬೇರೆ ಕ್ರಿಯಾವರ್ತನೆ*
*ಉಂಟೇ ಗೊಹೇಶ್ವರಾ'*

**ಗು**ರುವನ್ನು ಭವರೋಗ ವೈದ್ಯ ಎಂದೂ, ಅವನೊಬ್ಬನೇ ಭವರೋಗ ಕಳೆಯ ಬಲ್ಲನೆಂದೂ ಶರಣರು ಹಾಡಿ ಹೊಗಳಿದ್ದಾರೆ. ಗುರುಪಾದವ ಮುಟ್ಟಿ ಭವಗೆಟ್ಟೆನು ಎಂದಿದ್ದಾರೆ.

**ಜೇ**ಡರದಾಸಿಮಯ್ಯ ತನ್ನ ವಚನದಲ್ಲಿ ಗುರುವಿನ ಮಹತ್ವವನ್ನೂ ಹೀಗೆ ಹೇಳಿದ್ದಾರೆ.

*'ಗುರು ಕರುಣಿಸಲು ಸಂಸಾರ ವಿಷಯ ಕೆಟ್ಟಿತ್ತು*
*ಮಾಯಾಪ್ರಪಂಚ ಬಿಟ್ಟಿತ್ತು, ಹುಟ್ಟಿದರಾತು ಹೋಯಿತು*
*ನೆಟ್ಟನೆ ಗುರುಪಾದವ ಮುಟ್ಟಿ ಭವಗೆಟ್ಟೆನು ಕಾಣಾ*
*ರಾಮನಾಥಾ'*

*'ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ*
*ಆ ತೃಣವನಾ ಕಿಚ್ಚು ನುಂಗಿದಂತೆ*
*ಗುರುಚರಣದ ಮೇಲೆ ತನುವೆಂಬ ತೃಣವ ತಂದಿರಿಸಿದರೆ*
*ಆತನ ಸರ್ವಾಂಗವೆಲ್ಲವು ಲಿಂಗ ಕಾಣಾ ರಾಮನಾಥಾ'.*

**ಯು**ಗ ಯುಗಾಂತರಗಳಿಂದ ಗುರು-ಶಿಷ್ಯರ ಸಂಬಂಧ ಬೆಳೆದುಕೊಂಡುಬಂದಿದ್ದರೂ, ಯುಗಗಳಿಂದ ಯುಗಗಳಿಗೆ ವ್ಯತ್ಯಾಸವಾಗುತ್ತಾ ಅರ್ಥ ಬದಲಾವಣೆಯಾಗುತ್ತಾ ಬಂದಿರುವುದನ್ನು ಅಲ್ಲಮಪ್ರಭು ಸುಂದರವಾಗಿ ಚಿತ್ರಿಸಿದ್ದಾರೆ. ಈ ವಚನ ಪ್ರಸ್ತುತ ಸಂದರ್ಭಕ್ಕೆ ತೀರ ಹತ್ತಿರವಾಗಿದೆ.

*'ಕೃತಯುಗದಲ್ಲಿ ಶ್ರೀಗುರುಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ*
*ಆಗಲಿ ಮಹಾ ಪ್ರಸಾದವೆಂದನಯ್ಯ*
*ತ್ರೇತಾಯುಗದಲ್ಲಿ ಶ್ರೀಗುರುಶಿಷ್ಯಂಗೆ ಬಯ್ದು ಬುದ್ಧಿಯ ಕಲಿಸಿದರೆ*
*ಆಗಲಿ ಮಹಾಪ್ರಸಾದವೆಂದನಯ್ಯ*
*ದ್ವಾಪರ ಯುಗದಲ್ಲಿ ಶ್ರೀಗುರು ಶಿಷ್ಯಂಗೆ ಝುಂಕಿಸಿ ಬುದ್ಧಿಯ ಕಲಿಸಿದರೆ*
*ಆಗಲಿ ಮಹಾಪ್ರಸಾದವೆಂದನಯ್ಯ*
*ಕಲಿಯುಗದಲ್ಲಿ ಶ್ರೀ ಗುರು ಶಿಷ್ಯಂಗೆ ವಂದಿಸಿ ಬುದ್ಧಿಯ ಕಲಿಸಿದರೆ*
*ಆಗಲಿ ಮಹಾಪ್ರಸಾದವೆಂಧನಯ್ಯ ಗುಹೇಶ್ವರಾ*
*ನಿಮ್ಮ ಕಾಲದ ಕಟ್ಟಳೆಯ ಕಲಿತನಕ್ಕೆ ನಾನು ಬೆರಗಾದೆನು'*

**ನಾ**ಲ್ಕು ಯುಗಗಳಲ್ಲಿ ಕಂಡುಬಂದ ಗುರು-ಶಿಷ್ಯರ ಸಂಬಂಧವನ್ನು ಅರ್ಥಪೂರ್ಣವಾಗಿ, ಮಾರ್ಮಿಕವಾಗಿ ಪರಿಚಯ ಮಾಡಿಕೊಡಲಾಗಿದೆ.

**ಡಾ.** ಎಂ. ಚಿದಾನಂದಮೂರ್ತಿ ಅವರು ಅಲ್ಲಮನ ''ಕೃತಯುಗದಲ್ಲಿ ಶ್ರೀಗುರುಶಿಷ್ಯಂಗೆ ಬಡಿದು ಬುದ್ಧಿಯ ಕಲಿಸಿದರೆ .....'' ಎಂಬ ವಚನದ ವ್ಯಾಖ್ಯಾನವನ್ನು ಬೇರೆ ರೀತಿಯಲ್ಲಿಯೇ ವಿಶ್ಲೇಷಿಸಿದ್ದಾರೆ. ಹೊರನೋಟಕ್ಕೆ ಪ್ರಸ್ತುತ ಸಮಾಜದ ಗುರು-ಶಿಷ್ಯರ ಸಂಬಂಧಕ್ಕೆ ಹಿಡಿದ ಕನ್ನಡಿಯಂತಿದ್ದರೂ, ಡಾ. ಚಿದಾನಂದಮೂರ್ತಿ





ಯವರು ಈ ವ್ಯಾಖ್ಯಾನವನ್ನು ಒಪ್ಪುವುದಿಲ್ಲ. ಅವರು ಆ ಅರ್ಥದ ಗ್ರಹಿಕೆ ಅಲ್ಲಮನನ್ನೇ ಬೆಚ್ಚಿ ಬೀಳಿಸಬಲ್ಲದು. ಒಂದು ಬಗೆಯ ಬೆಡಗಿನ ರೀತಿಯ ಆ ವಚನವು ಗುರುಶಿಷ್ಯನ ಸಂಬಂಧವು ಕಾಲಕ್ರಮೇಣ ಕೆಡುತ್ತಾ ಬಂದಿರುವುದನ್ನು ಹೇಳುವುದಿಲ್ಲ. ಗುರುವಿನ ಉಪದೇಶದಿಂದ ಶಿಷ್ಯನಲ್ಲಿ ಆಗುತ್ತಾ ಬರುವ ಜ್ಞಾನದ ಅಥವಾ ಆಧ್ಯಾತ್ಮಿಕ ಸಾಧನೆಯ ಪ್ರಗತಿಯನ್ನು ಸೂಚಿಸುತ್ತಿದೆ. ಒಂದು ಘಟ್ಟದಲ್ಲಿ ಶಿಷ್ಯನು ಜ್ಞಾನದಲ್ಲಿ ಗುರುವನ್ನು ಮೀರಿ ಬೆಳೆದಾಗ ಆಗ ಗುರುವು ಹೆಮ್ಮೆಯಿಂದ ಶಿಷ್ಯನಿಗೆ (ಶಿಷ್ಯನ ಒಳಗಿನ ಜ್ಞಾನಕ್ಕೆ ಮನಸ್ಸಿನಲ್ಲೇ) ವಂದಿಸುತ್ತಾರೆ. ಗುರುವನ್ನು ಮೀರಿ ಶಿಷ್ಯ ಬೆಳೆದರೂ ತಾತ್ವಿಕವಾಗಿ ಗುರುವು ಎಂದಿಗೂ ಗುರುವೇ. ಶಿಷ್ಯ ಎಂದಿಗೂ ಶಿಷ್ಯನೇ. ಒಮ್ಮೆ ಗುರು ಎಂದೆಂದೂ ಗುರುವೇ ಎಂದರೆ ಯಾವುದೇ ಕಾಲದ ಬಳಕೆಯಲ್ಲಿದ್ದ ಪದಗಳ ಅರ್ಥವನ್ನು ತಿಳಿದುಕೊಳ್ಳ ಬೇಕಾಗುತ್ತದೆ. ಪದಗಳ ಅರ್ಥ ಶಾಶ್ವತವಲ್ಲ. ಕಾಲದಿಂದ ಕಾಲಕ್ಕೆ ಮಾರ್ಪಾಡಾಗುವಂತಹದು.[೧೧]

**ಡಾ.** ಎಂ. ಚಿದಾನಂದಮೂರ್ತಿ ಅವರ ಮೇಲಿನ ಅಭಿಪ್ರಾಯವನ್ನು ಒಪ್ಪಬಹುದಾದರೂ, ಈಗಿನ ಶಿಕ್ಷಣ ಪದ್ಧತಿ ಶಿಕ್ಷಣ ಕ್ಷೇತ್ರದಲ್ಲಿ ಗುರುವಿಗೂ ಅರ್ಥಾತ್ ಶಿಕ್ಷಕ-ಅಧ್ಯಾಪಕನಿಗೂ, ಶಿಷ್ಯನಿಗೂ, (ವಿದ್ಯಾರ್ಥಿಗಳಿಗೂ) ಇರುವ ಸಂಬಂಧವನ್ನು ನೋಡುವಾಗ ಹೊರನೋಟಕ್ಕೆ ಅಲ್ಲಮಪ್ರಭುಗಳ ವಚನ ಈಗಿನ ಪರಿಸ್ಥಿತಿಗೆ ನೂರಕ್ಕೆ ನೂರರಷ್ಟು ಹೊಂದಿಕೊಳ್ಳುವಂತಿದೆ.

**ಪು**ರಾಣ ಇತಿಹಾಸಗಳಲ್ಲಿ, ಶರಣ ಸಂಪ್ರದಾಯದಲ್ಲಿ ಗುರುವಿನ ಸ್ಥಾನವನ್ನು, ಗುರುವಿಗೆ ನೀಡುತ್ತಿದ್ದ ಗೌರವ ಅದು ಕಾಲದಿಂದ ಕಾಲಕ್ಕೆ ಅರ್ಥ ಬದಲಾವಣೆಗೊಳ್ಳುತ್ತಾ ಬಂದಿರುವುದನ್ನು ಕಾಣಬಹುದಾಗಿದೆ. ಈ ಅರ್ಥ ಬದಲಾವಣೆಗೆ ಕಾರಣ ಗುರುವೋ, ಶಿಷ್ಯನೋ ಅಥವಾ ಸಮಾಜವೋ ಎಂಬುದು ಗೊಂದಲಕ್ಕೆ ಎಡೆಮಾಡಿಕೊಟ್ಟಿದೆ. ಗುರುವು ತನ್ನ ಕರ್ತವ್ಯವನ್ನು ಸಮರ್ಥವಾಗಿ ನಿರ್ವಹಿಸಿದಾಗ ಗುರುವಿಗೆ ದೊರೆಯಬೇಕಾದ ಸ್ಥಾನ, ಗೌರವ, ಮನ್ನಣೆ ತಾನಾಗಿಯೇ ದೊರೆಯುತ್ತದೆ. ಶಿಷ್ಯನಲ್ಲಿ ಕಲಿಯಬೇಕೆಂಬ ಶ್ರದ್ಧೆ, ನಿಷ್ಠೆ ಕಡಿಮೆಯಾದಾಗ ಶಿಷ್ಯನ ಬಗ್ಗೆ ಗುರುವಿಗೆ ಪ್ರೀತಿ, ಪ್ರೇಮ ಕಡಿಮೆಯಾಗಿ ಶಿಕ್ಷಣ ನೀಡಲು ಹಿಂದೆಗೆಯುತ್ತಾನೆ. ಹೀಗಾದಾಗ ಗುರು-ಶಿಷ್ಯರ ನಡುವಿನ ಅಂತರ ಹೆಚ್ಚಾಗುತ್ತಾ ಹೋಗುತ್ತದೆ. ಇದರಿಂದ ಗುರುವಿಗಿಂತ ಶಿಷ್ಯನಿಗೆ ಹೆಚ್ಚು ನಷ್ಟವಾಗುತ್ತದೆ.

ಬಸವಣ್ಣನವರು ತಮ್ಮ ವಚನವೊಂದರಲ್ಲಿ ತ್ರಿವಿಧ ದಾಸೋಹದ ಮಹತ್ವವನ್ನು ತಿಳಿಸುತ್ತಾ, ಶಿಷ್ಯನಾದವನು ಉಪಾಸ್ಯಮೂರ್ತಿಗಳಾದ ಗುರುಲಿಂಗ ಜಂಗಮರಿಗೆ ತುನು ಮನ ಧನಗಳನ್ನು ಅರ್ಪಿಸಿದಾಗ ಮಲತ್ರಯಗಳಿಂದ ವಿಮುಕ್ತನಾಗುತ್ತಾನೆ. ಆಗ ಸರ್ವವ್ಯಾಪಕವು ಸರ್ವಜ್ಞತ್ವ ಮತ್ತು ಸರ್ವಕರ್ತೃತ್ವಗಳನ್ನು ಪಡೆದು ತ್ರಿವಿಧ ದಾಸೋಹಿಯಾಗಿ ಕಂಗೊಳಿಸುತ್ತಾನೆ. ಈ ತ್ರಿವಿಧವನ್ನು ಹೊರಗುಮಾಡಿ ಕೇವಲ ಲಿಂಗ ಪೂಜಿಸುವವರನ್ನು ಶಿವನು ಎಂದೂ ಮೆಚ್ಚಲಾರನು.

*ತನುವ ಕೊಟ್ಟು ಗುರುವನೊಲಿಸಬೇಕು*
*ಮನವ ಕೊಟ್ಟು ಲಿಂಗವನೊಲಿಸಬೇಕು*
*ಧನವ ಕೊಟ್ಟು ಜಂಗಮವನೊಲಿಸಬೇಕು*
*ಈ ತ್ರಿವಿಧವ ಹೊರಗು ಮಾಡಿ ಹರೆಯ ಹೋಲಿಸಿ*
*ಕುರುಹ ಪೂಜಿಸುವವರ ಮೆಚ್ಚ ಕೂಡಲಸಂಗಮದೇವ*[೧೨]

ಅನುಭಾವಿ ಅಲ್ಲಮಪ್ರಭುಗಳು ಗುರುವನ್ನು 'ಅರಿವಿ'ನ ರೂಪದಲ್ಲಿ ಕಂಡಿದ್ದಾರೆ. ಈ ಅರಿವೇ 'ಬಚ್ಚ ಬರಿಯ ಬೆಳಗು'. ಈ ಅರಿವಿನ ಸ್ವರೂಪವನ್ನು ನಿಜಗುಣ ಶಿವಯೋಗಿಗಳು ಹಾಡಿನ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ.

*ಅರಿವು ನೀನೆಂದು ಸದ್ಗುರು ಪೇಳೆ ತಿಳಿವನೆ । ಜಾಣರದೇವ ।*
*ಅರಿವಿನೊಳನ್ಯ ಕಲ್ಪನೆಗಳನುಳಿವನೆ । ಜಾಣರದೇವ ॥ ಪ ॥*
*ಅರಿವೆ ಪರಬ್ರಹ್ಮವೆಂದುಭಾವಿಸುವನೆ । ಜಾಣರದೇವ ।*
*ಅರಿವೆ ನಿತ್ಯನಿರ್ಮಳವೆಂದು ನೆನವನೆ । ಜಾಣರದೇವ ।*
*ಅರಿವೆ ನಿರ್ಗುಣ ನಿರ್ವಿಕೃತಿಯೆಂದು ಬಗೆವನೆ । ಜಾಣರದೇವ ।*
*ಅರಿವಿಲ್ಲದುದೆ ಜಡವಹುದೆಂದು ಬಿಡುವನೆ । ಜಾಣರದೇವ ।*

ಹೀಗೆ ಬೆಳೆಯುತ್ತಾ ಹೋಗುತ್ತದೆ ಹಾಡು *'ಅರಿವೆ ಸದಾನಂದ', 'ಅರಿವೆ ಸ್ವಯಂ ಜ್ಯೋತಿ', 'ಅರಿವೆ ವಿಶ್ವಾತ್ರಯ', 'ಅರಿವೆ ವಿದ್ಯಾ ದೈವಗುರು'.* ಇಂತಹ ಅನೇಕ ಮಾತುಗಳು ಇಲ್ಲಿ ಬರುತ್ತಿವೆ. 'ನಹಿ ಜ್ಞಾನೇನ ಸದೃಶಂ ಪವಿತ್ರಮಿಹವಿದ್ಯತೇ' ಎಂಬ ಮಾತಿನ ಮಹತ್ವವನ್ನು ಮನಗಾಣಿಸಿಕೊಡುತ್ತವೆ.[೧೩]

*(ಮುಂದುವರೆಯುತ್ತದೆ)*

೧೧. ಡಾ. ಎಂ. ಚಿದಾನಂದಮೂರ್ತಿ, ದೇಗುಲಸಿರಿ, ಪ್ರ. ನಿರಂಜನ ಚರಪಟ್ಟಾಧಿಕಾರ ಸಮಿತಿ, ಶ್ರೀ ದೇಗುಲಮಠ, ಕನಕಪುರ, ಪು-೮೬.

೧೨. ವಿಶ್ವಪ್ರಭೆ-೩, ಪುಟ-೩೫೨.

೧೩. ಕೈವಲ್ಯ, ಪ್ರ. ಶ್ರೀ ಸರ್ಪಭೂಷಣ ಶಿವಯೋಗಿಗಳ ಟ್ರಸ್ಟ್, ಬೆಂಗಳೂರು-೯. ಪುಟ-೧೩೫.

# ಸಮತೆಯ ಯೋಗಿ ಸಿದ್ಧರಾಮ

– ಬಸವರಾಜ ಹೂಗಾರ
ಹಿರೇಸಿಂಗನಗುತ್ತಿ, ಹುನಗುಂದ ತಾಲ್ಲೂಕು,
ಬಾಗಲಕೋಟೆ – ೫೮೭೧೫೪.

ಹನ್ನೆರಡನೆಯ ಶತಮಾನದಲ್ಲಿ ಬಸವಾದಿ ಶರಣರು ಕೈಕೊಂಡ ಸಾಮಾಜಿಕ, ಸಾಹಿತ್ಯಿಕ ಹಾಗೂ ಧಾರ್ಮಿಕ ಕ್ರಾಂತಿಗಳು ನಾಡಿನ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆಯಲ್ಪಟ್ಟಿವೆ. ಮಾನವ ಜನಾಂಗದ ಹಿತದೃಷ್ಟಿಯಿಂದ ಶರಣರು ಅಂದು ಅನುಷ್ಠಾನಕ್ಕೆ ತಂದ ಕಾಯಕ ಮತ್ತು ದಾಸೋಹ ತತ್ವಗಳು ಇಂದಿಗೂ ಪ್ರಸ್ತುತವಾಗಿವೆ. ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ನಡೆದ 'ಅನುಭವ ಮಂಟಪ' ದಲ್ಲಿನ ಚರ್ಚೆ ಅನೇಕ ವಚನಕಾರರ ಅಭಿವ್ಯಕ್ತಿಗೆ ಅನುಕೂಲ ಮಾಡಿಕೊಟ್ಟಿತು. ಈ ಅಪರೂಪದ ಕ್ರಾಂತಿಯಿಂದ ಜನರು ಕಾಶ್ಮೀರ ದಿಂದ ಕನ್ಯಾಕುಮಾರಿಯವರೆಗೆ ತಂಡೋಪ ತಂಡವಾಗಿ ಕಲ್ಯಾಣಕ್ಕೆ ಬರುವಂತಾಯಿತು. ಶರಣರ ಅನುಭಾವದ ಮೂಸೆಯಲ್ಲಿ ಸಹಜ ವಾಗಿ ಹೊರಹೊಮ್ಮಿದ ವಚನಗಳು ಜ್ಞಾನದ ರತ್ನದರಳುಗಳಾಗಿವೆ. ಮಾನವ ನನ್ನು ಮಹಾ ಮಾನವನ್ನಾಗಿಸುವ ಸಾಮರ್ಥ್ಯವನ್ನು ಪಡೆದಿವೆ. ಕನ್ನಡ ಸಾಹಿತ್ಯದ ಆತ್ಮದಂತಿರುವ ವಚನಗಳು ಶರಣರು ವಿಶ್ವಸಾಹಿತ್ಯಕ್ಕೆ ನೀಡಿದ ಅಮೂಲ್ಯವಾದ ಕೊಡುಗೆ ಯಾಗಿವೆ. ನುಡಿದಂತೆ ನಡೆದ, ಬರಹದಂತೆ ಬದುಕಿದ ಶರಣರ ವಚನಗಳು ಸಾರ್ವಕಾಲಿಕ ಸತ್ಯ ದಿಂದೊಡಗೂಡಿ ಮುಂಬರುವ ಜನಾಂಗಕ್ಕೆ ದಾರಿದೀಪವಾಗಿವೆಯೆಂದರೆ ಅತಿಶಯೋಕ್ತಿ ಯೆನಿಸಲಾರದು.

ಬಸವಾದಿ ಶರಣರ ಸಮಕಾಲೀನ ಶರಣನಾಗಿ ಸೊನ್ನಲಿಗೆ (ಈಗಿನ ಸೊಲ್ಲಾಪೂರ)ಯನ್ನು ಅಭಿನವ ಶ್ರೀಶೈಲವನ್ನಾಗಿಸಿ, ಅಲ್ಲಿ ಕೆರೆ ಬಾವಿ ಕಟ್ಟಿಸಿ, ಜೀವಕರುಣೆ, ಸಮಾಜೋದ್ಧಾರದ ಸುಗಂಧ ಬೀರಿದ ಸಿದ್ಧರಾಮನ ಹೆಸರು ಧಾರ್ಮಿಕ ಇತಿಹಾಸದಲ್ಲಿ ಅಚ್ಚಳಿಯದ ಅಧ್ಯಾಯವಾಗಿದೆ. ಮೊದಲು ಸಿದ್ಧರಾಮನು ಕರ್ಮಯೋಗಿಯಾಗಿ ಸೊನ್ನಲಿಗೆಯಲ್ಲಿ ತನ್ನ ಆರಾಧ್ಯದೇವನಾದ ಮಲ್ಲಿಕಾರ್ಜುನನ ದೇವಾಲಯವನ್ನು ಕಟ್ಟಿಸಿದನು. ನಂತರ ಜನರ ಹಿತಕ್ಕಾಗಿ ಕೆರೆ, ಬಾವಿ ಕಟ್ಟಿಸಿ ಕೃಷಿಗೆ ಉತ್ತೇಜನ ನೀಡಿದನು. ಕರ್ಮಯೋಗದಲ್ಲಿ ನಿರತನಾಗಿದ್ದ ಸಿದ್ಧರಾಮನ ಮನಪರಿವರ್ತನೆ ಮಾಡಲು ಪ್ರಭುದೇವರು ಒಮ್ಮೆ ಸೊನ್ನಲಿಗೆಗೆ ಬಂದರು. ಅವರು ಸಿದ್ಧರಾಮನಿಗೆ; ಬರಿ ಕರ್ಮ ಯೋಗದಲ್ಲಿ ತನ್ಮಯವಾದರೆ ಬಾಳು ಪರಿಪೂರ್ಣವಾಗಲಾರದು. ನೀನು ಮಾಡುವುದು ಕೇವಲ ನಿನ್ನ ಹಾಗೂ ನಿನ್ನನ್ನು ಅವಲಂಬಿ ಸಿದವರ ಹೊಟ್ಟೆ ತುಂಬಿಸುವ ಕೆಲಸವಾಗಿದೆ. ಕರ್ಮದ ಜೊತೆಗೆ ಜ್ಞಾನವೂ ಬೇಕು. ಹೊಟ್ಟೆ ತುಂಬಿದರೆ ಸಾಲದು, ಜ್ಞಾನವೂ ಬೇಕು. ದೇವರು ಮನುಷ್ಯನ ದೇಹದಲ್ಲಿ ಕರ್ಮೇಂದ್ರಿಯಗಳ ಜೊತೆ ಜ್ಞಾನೇಂದ್ರಿಯಗಳನ್ನು ಸೃಷ್ಟಿಮಾಡಿದ್ದಾನೆ. ನೀನು ಬಸವಣ್ಣನಿರುವ ಕಲ್ಯಾಣಕ್ಕೆ ಬಾ ಎಂದು ಹೇಳಿ ಆತನನ್ನು ಕರೆದುಕೊಂಡು ಕಲ್ಯಾಣಕ್ಕೆ ಬಂದರು. ಸಿದ್ಧರಾಮನು ಅಲ್ಲಿದ್ದು ತನ್ನ ವಚನಗಳ ಮೂಲಕ ಸಮತೆಯ ಸಂದೇಶ ಸಾರಿದ್ದು ಗಮನಾರ್ಹ ವಾಗಿದೆ.

ಮನುಷ್ಯನಿಗೆ ಹಸಿವು ನೀರಡಿಕೆ ಸ್ವಾಭಾವಿಕವಾಗಿರುತ್ತವೆ. ಹೊಟ್ಟೆಗೆ ಅನ್ನ ಸೇರಿದಾಗಲೇ ಮನಸ್ಸು ಶಾಂತವಾಗಿರು ತ್ತದೆ. ಆಗ ದೇಹದ ಅಂಗಾಂಗಗಳಲ್ಲಿ ನವ ಚೈತನ್ಯ ಉಂಟಾಗುತ್ತದೆ. ಹಸಿವೆ ಯಾದಾಗ ಮನಸ್ಸು ಕಸಿವಿಸಿಗೊಳ್ಳುತ್ತದೆ. ಆಗ ಎಂತಹ ಶಾಸ್ತ್ರ ಪುರಾಣ ಹೇಳಿದರೂ ಹಸಿದವರ ಮನಸ್ಸು ಸ್ಥಿಮಿತದಲ್ಲಿ ಉಳಿ ಯುವುದಿಲ್ಲ. ಪ್ರಸಾದ ಸೇವಿಸಿದಾಗ ಮನಸ್ಸು ಪ್ರಸನ್ನವಾಗಿ ಬಾಯಿಯಿಂದ ತೃಪ್ತಿಯ ಮಾತುಗಳು ಹೊರಬರುತ್ತವೆ. ಅನ್ನವನ್ನು ದೊರಕಿಸಿಕೊಳ್ಳಲು ಮನುಷ್ಯ ಭೂಮಿಯಲ್ಲಿ ದುಡಿಯಬೇಕಾಗುತ್ತದೆ. ಮನುಷ್ಯ ಕರ್ಮಯೋಗಿ ಯಾಗಿ, ನೇಗಿಲಯೋಗಿಯಾಗಿ ಹೊಲದಲ್ಲಿ ಧಾನ್ಯ ಬೆಳೆದು ತನ್ನ ಹಾಗೂ ತನ್ನನ್ನು ಅವಲಂಬಿಸಿದರ ಉದರ ಪೋಷಣೆ ಮಾಡಬೇಕು. ಮನೆಗೆ ಬಂದ ಅತಿಥಿಗಳನ್ನು ಉಪಚರಿಸಿ ಉಣಿಸಿ ಮನ ತಣಿಸಬೇಕು. ತಾನು ನೀಡುವೆ ಎಂಬ ಅಹಂಕಾರವಿಲ್ಲದ 'ದಾಸೋಹ'ದಿಂದ ಹಸಿದವರ ತನು, ಮನವನ್ನು ತಣಿಸಬೇಕು.



ವಚನಕಾರರು

ದಾಸೋಹ ಕಾರ್ಯ ನಡೆಸಲು ಪ್ರಥಮವಾಗಿ ಮನುಷ್ಯ ಕೃಷಿ ಕಾಯಕದಲ್ಲಿ ತೊಡಬೇಕಾಗುತ್ತದೆ. ಪ್ರಾಮಾಣಿಕ ಉದ್ಯೋಗವಾದ ಒಕ್ಕಲು ತನದ ಶ್ರೇಷ್ಠತೆಯನ್ನು ಕರ್ಮಯೋಗಿಯಾಗಿ ಸಿದ್ಧರಾಮ ತನ್ನದೊಂದು ವಚನದಲ್ಲಿ ಹೀಗೆ ಹೇಳಿದ್ದಾನೆ.

*ಕೃಷಿಯ ಮಾಡಿ ಉಣ್ಣದೆ ಹಸಿವು ಹರಿವ ಪರಿ ಇನ್ನೆಂತೋ? ಕರ್ಮಯೋಗವ*
*ಮಾಡದೆ ನಿರ್ಮಲ ಸುಚಿತ್ತನರಿವ ಪರಿ ಇನ್ನೆಂತೋ?*
*ಬೇಯದ ಅಶನವನುಂಬ ತಾವುದು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ!*

ದೇಹದ ಬೆಳವಣಿಗೆಗೆ ಅನ್ನ ಅವಶ್ಯಬೇಕಾದಂತೆ ಮನುಷ್ಯನ ಜೀವನ ವಿಕಾಸಕ್ಕೆ ಮತ್ತು ವ್ಯಕ್ತಿತ್ವ ಪ್ರಕಾಶಕ್ಕೆ ಜ್ಞಾನ ಮುಖ್ಯ ಬೇಕಾಗುತ್ತದೆ. ಜ್ಞಾನವಿಲ್ಲದ ಮನುಷ್ಯ ಜೀವನ ಕಷ್ಟದ ಕಾನನ ವಾಗುತ್ತದೆ. ಜ್ಞಾನದಿಂದ ಲೌಕಿಕ ಸುಖದೊಂದಿಗೆ ಪಾರಮಾರ್ಥಿಕದ ಲಾಭವನ್ನು ಪಡೆಯಲು ಅನುಕೂಲವಾಗುತ್ತದೆ. ಹಕ್ಕಿಗೆ ಎರಡು ರೆಕ್ಕೆಗಳು ಬೇಕಾಗುವಂತೆ, ನೋಟಕ್ಕೆ ಎರಡು ಕಣ್ಣು ಬೇಕಾದಂತೆ ಮನುಷ್ಯನಿಗೆ ಕರ್ಮ ಮತ್ತು ಜ್ಞಾನ ಎರಡೂ ಬೇಕು. ಅರಿವು ಜಾಗೃತ ನಾದ ಮನುಷ್ಯನಿಗೆ 'ಜ್ಞಾನಿ' ಎಂದು ಕರೆಯುತ್ತಾರೆ. ಈ ವಚನ ಜ್ಞಾನಿಯ ಜೀವನಕ್ಕೆ ಹಾಗೂ ಅರ್ಹತೆಗೆ ಹಿಡಿದ ಕನ್ನಡಿಯಾಗಿದೆ.

*ಜ್ಞಾನಿಗಳು ತಾವಾದ ಬಳಿಕ ಅನ್ಯರ ಹಂಗಿನೊಳಗಿರಬಾರದು.*
*ಜ್ಞಾನಿಗಳು ತಾವಾದ ಬಳಿಕ ಅನ್ಯರ ಕುಲವನರಸಬಾರದು.*
*ಜ್ಞಾನಿಗಳು ತಾವಾದ ಬಳಿಕ ಅಸತ್ಯವ ನುಡಿಯಬಾರದು*
*ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ.*

ಜ್ಞಾನಿಯಾದವನು ಅನ್ಯರ ಆಧೀನದಲ್ಲಿ ಇರದೆ ತಾನು ಕಷ್ಟಪಟ್ಟು ದುಡಿದು ಆ ಫಲದಿಂದ ತನ್ನ ಹಾಗೂ ತನ್ನ ಸತಿ ಸುತರನ್ನು ಸಲುಹಬೇಕು. ಉದಾರ ಮನಸ್ಸಿನಿಂದ ಹಸಿದವರಿಗೆ, ಅನಾಥ ಅಂಗವಿಕಲರಿಗೆ ದಾನಮಾಡಿ ಮಾನವತೆಯ ಮಕರಂದವನ್ನು ಹೊರಸೂಸಬೇಕು. ಜಾತೀಯತೆಯನ್ನು ಮರೆತು, ಪ್ರೀತಿ ಸೌಹಾರ್ದತೆಯಿಂದ ಎಲ್ಲರೊಳು ಬೆರೆತು ಸ್ನೇಹ ಸಹಕಾರದಿಂದ ಜೀವಿಸಬೇಕು. ಕುಲಗಳನ್ನು ಎಣಿಸಬಾರದು. ಉದ್ಯೋಗದ ಆಧಾರದ ಮೇಲೆ ಹುಟ್ಟಿ ಬಂದ ಜಾತಿ, ಕುಲಗಳನ್ನು ಗಮನಿಸಿದೆ ವ್ಯಕ್ತಿಯ ಗುಣ ಸ್ವಭಾವಕ್ಕೆ ಬೆಲೆ ಕೊಡಬೇಕು. ಇಂತಹ ವಿಶಾಲ ಮನಸ್ಸಿನ ಜ್ಞಾನಿಗೆ ಸಮಾಜದಲ್ಲಿ ಗೌರವ, ಮಾನ, ಮರ್ಯಾದೆ ಸಿಗುತ್ತದೆ. ಕೀರ್ತಿ, ಯಶಸ್ಸು ಇವು ನೆರಳಿನಂತೆ ಹಿಂಬಾಲಿಸಿ ಬರುತ್ತವೆ.

ಜೀವನದಲ್ಲಿ ನಮಗೆ ಯಾರಾದರೂ ನಿಂದಿಸಿದರೆ ಆಗ ನಾವು ಸಿಟ್ಟಿಗೇಳಬಾರದು. ಇದಲ್ಲದೆ ಯಾರಾದರೂ ನಮಗೆ ಗೌರವ ಭಾವನೆಯಿಂದ ವಂದಿಸಿದರೆ ಮನದೊಳಗೆ ಹಿಗ್ಗಿ ಅಹಂಕಾರ ಪಡಬಾರದು. ರೋಷದಿಂದ ಬೈಯ್ದವರ ಮೇಲೆ ನಾವು ಕೋಪ ಪಡಬಾರದು. ರೋಷದಿಂದ ಬೈಯ್ದವರ ಮೇಲೆ ನಾವು ಕೋಪ ಗೊಳ್ಳದೆ ಅವರು ನಮ್ಮಲ್ಲಿಯ ದೋಷ ಕಳೆಯಲು ನಿಂದಿಸಿದ್ದಾರೆಂದು ತಿಳಿದು ಸುಮ್ಮನಾಗಬೇಕು. ರೋಷವನ್ನು ನಿಗ್ರಹಿಸಿ ಶಾಂತಚಿತ್ತದಿಂದ ಇರಬೇಕು. ಇಂತಹ ಸಮತಾಗುಣದಿಂದ ಜೀವನದಲ್ಲಿ ಸುಖಶಾಂತಿ ಪಡೆಯಲು ಅನುಕೂಲವಾಗುತ್ತದೆ. ತನ್ನರಿವೆ ಗುರುವಾಗಿ ಜ್ಞಾನಿಗೆ ಸಮತೆಯ ಸರಿದಾರಿಯನ್ನು ತೋರಿಸುತ್ತದೆ. ಸಿದ್ಧರಾಮನ ಈ ವಚನ ಸಮತೆಯ ಬೆಳಕು ಬೀರುವ ದೀಪಸ್ತಂಭವಾಗಿದೆ.

*ಆರೇನಂದರೂ ಓರಂತಿದ್ದುದೇ ಸಮತೆ*
*ಆರು ಜರಿದವರೆನ್ನ ಮನದ ಕಾಳಿಕೆಯ ಕಳೆದರೆಂಬುದೆ ಸಮತೆ*
*ಆರು ಸ್ತೋತ್ರವ ಮಾಡಿಹರೆನ್ನ ಜನ್ಮ ಜನ್ಮದ-*
*ಹಗೆಗಳೆಂಬುದೇ ಕಾರಣ್ಯ, ಮನವಚನ ಕಾಯದಲ್ಲಿ-*
*ಅವಿತವಿಲ್ಲದಿರ್ದಡೆ ಕಪಿಲಸಿದ್ಧ ಮಲ್ಲಿಕಾರ್ಜುನ*
*ನಿಮ್ಮ ವರನೇನೆಂಬುದೆ ಸಮತೆ*

ಮಾನವನ ಜೀವನದಲ್ಲಿ ಸಿರಿತನ ಬಡತನ ಬಂದು ಹೋಗುತ್ತವೆ. ಇವು ಬಿಸಿಲು ನೆರಳಿನಂತೆ ಸ್ವಾಭಾವಿಕವಾಗಿರುತ್ತವೆ. ಜೀವನಾದ್ಯಂತ ಯಾರಿಗೂ ಬಡತನದ ಭವಣೆ ಹಾಗೂ ಸಿರಿತನದ ಸೌಖ್ಯವಿರಲಾರದು. ಸಿರಿತನ ಬಂದಾಗ ಉತ್ಸಾಹದಿಂದ ಉಬ್ಬಿದಾನ ಧರ್ಮ ಮಾಡದೆ ತನ್ನ ಅಹಂಮಿಕೆಯಲ್ಲಿಯೇ ಕಾಲಕಳೆಯ ಬಾರದು. ಬಡತನ ಬಂದಾಗ ಹಾಗೂ ತನ್ನ ಉದ್ಯೋಗ, ವ್ಯವಹಾರ ದಲ್ಲಿ ಹಾನಿಯಾದಾಗ ವ್ಯಾಕುಲ ಚಿತ್ತನಾಗಿ ಚಿಂತೆಯಿಂದ ಕಾಲ ಕಳೆಯಬಾರದು. ಮನಸ್ಸು ತುಂಬಾ ಚಂಚಲವಾದುದು. ಚಿಜ್ಜಡ ವಾದ ಮನಸ್ಸು ಸದಾ ಸಂಕಲ್ಪ ವಿಕಲ್ಪಗಳಿಂದ ಕೂಡಿರುತ್ತದೆ. ಈ ಚಂಚಲವಾದ ಮನಸ್ಸನ್ನು ಸಾಧನೆಯಿಂದ ಸಮಚಿತ್ತದಲ್ಲಿ ಇರಿಸ ಬೇಕು. ಕಷ್ಟ ನಷ್ಟ ಬಂದಾಗ ಮತ್ತು ಸುಖ ಸಂತೋಷ ಉಂಟಾದಾಗ ಅವೆರಡರಲ್ಲಿ ಸಮವಾಗಿ ವಿಹರಿಸುವಂತೆ ಅದಕ್ಕೆ ತರಬೇತಿ ಕೊಡಬೇಕು. ಕಷ್ಟಸುಖದಲ್ಲಿ ಸಮಭಾವವಿದ್ದರೆ ಮನುಷ್ಯನಿಗೆ ಯಾವ ಚಿಂತೆ ಇರದೆ ಬಾಳು ಸುಸೂತ್ರವಾಗಿ ಸಾಗುತ್ತದೆ. ಸ್ಥಿತಪ್ರಜ್ಞನಾದ ಜ್ಞಾನಿಗೆ ಈ ಗುಣ ಲಭಿಸುತ್ತದೆ. ಸಿದ್ಧರಾಮನ ಈ ವಚನ ಮೇಲಿನ ವಿಚಾರಗಳಿಗೆ ಪುಷ್ಟಿಯನ್ನೀಡುತ್ತದೆ.

*ಸಿರಿಯಾಯಿತ್ತೆಂದು ಉತ್ಸಾಹದಿಂದುಬ್ಬದೆ*
*ಕೆಟ್ಟಿತ್ತೆಂದು ಮನನೊಂದು ಖಿನ್ನವಾದಂತಿರದೆ*
*ಮನ ವಿಚ್ಛಂದವಾಗಾದೊಂದೆಯಿಂದದಲ್ಲಪ್ಪಂ ತಪ್ಪ*
*ನಿಮ್ಮದೊಂದು ಸಮತಾಗುಣ ಎನ್ನನೆಂದು ಹೊದ್ದಿಪ್ಪುದು*
*ಹೇಳಾ ಕಪಿಲಸಿದ್ಧ ಮಲ್ಲಿಕಾರ್ಜುನಾ!*

ಕರ್ಮಯೋಗಿಯಾಗಿ ಸೊನ್ನಲಿಗೆ (ಸೊಲ್ಲಾಪುರ)ಯಲ್ಲಿ ಕೆರೆ ಬಾವಿ ಕಟ್ಟಿಸಿ ಕೃಷಿಗೆ ಉತ್ತೇಜನ ನೀಡಿ ನಂತರ ಪ್ರಭುದೇವರ ಆದೇಶದಂತೆ ಕಲ್ಯಾಣಕ್ಕೆ ಬಂದು ಜ್ಞಾನನಿಧಿ ಚೆನ್ನಬಸವಣ್ಣನವರಿಂದ ಜ್ಞಾನ ದೀಕ್ಷೆ ಪಡೆದು ಜ್ಞಾನಯೋಗಿಯಾಗಿ ಕರ್ಮ, ಜ್ಞಾನದಲ್ಲಿ ಸಮನ್ವಯ ಸಾಧಿಸಿ ಸಮತೆಯ ಯೋಗಿಯಾದ ಸಿದ್ಧರಾಮನ ಸಂದೇಶ ಮನಕುಲಕ್ಕೆಲ್ಲ ದಾರಿದೀಪವಾಗಿದೆ. ಆತನ ವಚನಗಳು ಭಕ್ತಿಜ್ಞಾನದ ಸಂಗಮವಾಗಿ ಬಾಳನ್ನು ಸುಂದರ, ಸುಭದ್ರಗೊಳಿಸಲು ಸಹಕಾರಿಯಾಗಿವೆ.

★

# ನಿಲುಕದ ಸೃಷ್ಟಿಯ ರಹಸ್ಯ

– ಕೃಷ್ಣಮೂರ್ತಿ ಕುಲಕರ್ಣಿ

ವೈಜ್ಞಾನಿಕವಾಗಿ ವಿಶ್ವ ಇಂದು ಅತ್ಯದ್ಭುತ ಪ್ರಗತಿ ಸಾಧಿಸಿದೆ. ಸೃಷ್ಟಿಕರ್ತನಿಗೆ ಸವಾಲಾಗುವಂತೆ ಅನೇಕ ಮಹತ್ತರ ಕೊಡುಗೆಗಳನ್ನು ನೀಡಿದೆ. ಇದೆಲ್ಲ ಸೃಷ್ಟಿಯ ಸಹಕಾರದಿಂದ ಮಾತ್ರ ಸಾಧ್ಯ ಎನ್ನಬೇಕು. ಯಾಕೆಂದರೆ ವಿಶ್ವದ ಕರಾವಳಿ ಪ್ರದೇಶಗಳಲ್ಲಿ ೨೬-೧೨-೨೦೦೪ರ ಭಾನುವಾರ ಸಂಭವಿಸಿದ ಕರಾಳ ಭೂಕಂಪನದ ಅಟ್ಟಹಾಸದ ಮುನ್ಸೂಚನೆ ಈ ವೈಜ್ಞಾನಿಕ ರಂಗದ ಅರಿವಿಗೆ ಬಾರದೇ ಹೋಗಿದೆ. ಇದೊಂದು ವಿಪರ್ಯಾಸ ಎನ್ನುವುದಕ್ಕಿಂತ ನಿಸರ್ಗ ತನ್ನೆಲ್ಲ ಗುಟ್ಟನ್ನು ಇನ್ನು ಬಿಟ್ಟುಕೊಟ್ಟಿಲ್ಲ ಎಂಬುದನ್ನು ನಾವು ಒಪ್ಪಿಕೊಳ್ಳದೇ ವಿಧಿ ಇಲ್ಲ.

ಸಾಗರದಾಳದಲ್ಲಿ ಧಿಡೀರ್ ಸಂಭವಿಸಿದ ಈ ರುದ್ರ ಭೀಕರ ಘಟನೆಗೆ ಜ್ವಾಲಾಮುಖಿಯಿಂದ ಸಿಡಿದೆದ್ದ ದೈತ್ಯ ಅಲೆಗಳ ಸರಣಿ ಆಕ್ರಮಣವನ್ನು 'ಸುನಾಮಿ' ಎಂದು ಕರೆಯಲಾಗುತ್ತದೆ.

ಇಂಡೋನೇಷ್ಯಾದ ಸುಮಾತ್ರಾ ದ್ವೀಪದ ಕಡಲಿನಲ್ಲಿ ಸಂಭವಿಸಿದ ಭೀಕರ ಭೂಕಂಪನದ ಪರಿಣಾಮವಾಗಿ ಉಕ್ಕಿದ ಕಡಲ ಅಲೆಗಳು (ಸುನಾಮಿ) ರುದ್ರಗರ್ಜನೆ ಹಾಕಿದವು. ಹಿಂದೂ ಮಹಾಸಾಗರ ಮತ್ತು ಬಂಗಾಲಕೊಲ್ಲಿಯ ತೀರದ ದೇಶಗಳಿಗೆ ಅಪ್ಪಳಿಸಿ, ಸುಮಾರು ೧.೫೦ ಲಕ್ಷಕ್ಕೂ ಹೆಚ್ಚು ಜನ ಅಮಾಯಕರನ್ನು ಬಲಿ ತೆಗೆದುಕೊಂಡಿದೆ.

ರಿಕ್ಟರ್ ಮಾಪನದಲ್ಲಿ ೮.೯ರಷ್ಟಿದ್ದ ಭೂಕಂಪನ, ಬೆಳಗಿನ ಜಾವ ಭಾರತೀಯ ಕಾಲಮಾನದಂತೆ ೬.೨೯ ನಿಮಿಷಕ್ಕೆ ಭೂಮಿಯಿಂದ ಸುಮಾರು ೧೫೦ ಅಡಿಗಳಷ್ಟು ಆಳದಲ್ಲಿ ಸಂಭವಿಸಿದೆ. ಕಂಪನದ ತೀವ್ರತೆಗೆ ದೈತ್ಯ ಕಡಲ ಅಲೆಗಳು ೧೦ ಮೀಟರ್‌ಗೂ ಹೆಚ್ಚು ಎತ್ತರಕ್ಕೆ ಉಕ್ಕಿ ಅಪ್ಪಳಿಸಿವೆ. ಇದರಿಂದಾಗಿ ಇಂಡೋನೇಷ್ಯಾ, ಮೇಲೆಷ್ಯಾ, ಶ್ರೀಲಂಕಾ, ಭಾರತ, ಬಾಂಗ್ಲಾದೇಶ, ಸಿಂಗಾಪುರ, ಮಾಲ್ಡೀವ್ಸ್‌ನ ಕಡಲ ತೀರ ವ್ಯಾಪ್ತಿಯಲ್ಲಿ ಮುಗ್ಧರ ಮೇಲೆ ಮಹಾಸಮರವೇ ನಡೆದು ಎಣಿಕೆಗೆ ಬಾರದಷ್ಟು ಜೀವಹಾನಿ ಸಂಭವಿಸಿದೆ. ಊಹಿಸಲಾರದಷ್ಟು ಆಸ್ತಿಹಾನಿಯಾಗಿದೆ.

ಕ್ರಿಸ್‌ಮಸ್ ಹಬ್ಬದ ಸಡಗರದಲ್ಲಿ ಪಾಲ್ಗೊಂಡು ರಾತ್ರಿ ತಡವಾಗಿ ನಿದ್ದೆಹೋಗಿದ್ದ ಇಂಡೋನೇಷ್ಯಾದ ಕಡಲತೀರ ಪ್ರದೇಶಗಳ ಜನತೆಯನ್ನು ಭೂಕಂಪನದಿಂದ ಸಿಡಿದೆದ್ದ ಭಾರಿ ಅಲೆಗಳು ಯಾವುದೇ ಮುನ್ಸೂಚನೆ ನೀಡದೇ ನುಂಗಿ ಹಾಕಿರುವುದು ದುರಾದೃಷ್ಟಕರ ಸಂಗತಿ.

ಭೂಕಂಪನದ ತೀವ್ರತೆಗೆ ಬೆದರಿದ ಜನತೆ ದೈತ್ಯ ಕಡಲ ಅಲೆಗಳಿಂದ ಜೀವ ಉಳಿಸಿಕೊಳ್ಳಲು ಹತ್ತಿರದ ಎತ್ತರ ಪ್ರದೇಶಗಳಿಗೆ ಓಡಿದರು. ಪ್ರವಾಹೋಪಾದಿಯಲ್ಲಿ ಉಕ್ಕಿ ಬಂದ ಅಲೆಗಳು ತೀರ ಪ್ರದೇಶದ ಬಹುದೂರದವರೆಗೆ ತನ್ನ ಕರಾಳ ನಾಲಿಗೆ ಚಾಚಿದವು. ಅಲೆಗೆ ಸಿಲುಕಿ ನರಳಿದವರ ಅಕ್ರಂದನ ಕಡಲ ಅಲೆಯ ಆರ್ಭಟದ ಮುಂದೆ ಗೌಣವಾಯಿತು.

ಅಲೆಗಳು ಇಳಿದುಹೋದ ಮೇಲೆ ಸುತ್ತಲಿನ ಮರಗಳು, ಎತ್ತರ ಕಟ್ಟಡಗಳ ಮೇಲೆ ಅನಾಥ ಶವಗಳ ಅಲಂಕಾರ, ಎಂತಹ ಕಲ್ಲೆದೆಯನ್ನು ಕರಗಿಸುವಂತಿತ್ತು ಈ ಭಯಾನಕ ದೃಶ್ಯ.

ಕಳೆದ ೪೦ ವರ್ಷಗಳಲ್ಲಿ ಅಪ್ಪಳಿಸಿದ ಅತ್ಯಂತ ರುದ್ರ ಭೀಕರ ಭೂಕಂಪನ ಇದಾಗಿದ್ದು ಇಂಡೋನೇಷ್ಯ ಕಡಲತೀರದ 'ಲನ್‌ಕುಕ್' ಎಂಬ ಹಳ್ಳಿ ನಾಮಶೇಷವಾಗಿದೆ. ಅನಿರೀಕ್ಷಿತ ಭಾರಿ ಕಡಲ ಅಲೆಗಳಿಂದಾಗಿ ಅಣೆಕಟ್ಟುಗಳು ನಾಶವಾಗಿರುವ ಶಂಕೆ ಮೂಡಿದೆ. ನದಿಗಳು ಹರಿಯತೊಡಗಿವೆ. ಕಟ್ಟಡಗಳು ನಾಶವಾಗಿವೆ.

೧೭೦೦೦ ದ್ವೀಪಗಳಿಂದ ಕೂಡಿರುವ ಇಂಡೋನೇಷ್ಯಾ ದೇಶ ಪೆಸಿಫಿಕ್‌ನ ಅಗ್ನಿ ಬಳೆಯ ವಲಯದಲ್ಲಿದೆ. ಭೂಮಿಯಾಳದ ತೇಲು ತಟ್ಟೆಗಳು ಘರ್ಷಿಸುವ ಜಾಗ ಇದಾಗಿದ್ದರಿಂದ ಭೂಕಂಪನ ಮತ್ತು ಜ್ವಾಲಾಮುಖಿಗಳು ಇಲ್ಲಿ ಸಾಮಾನ್ಯ.

ಸಮುದ್ರ ಮಟ್ಟದಿಂದ ಸರಾಸರಿ ಮೂರು ಅಡಿ ಎತ್ತರದಲ್ಲಿರುವ ಮಾಲ್ಡೀವ್ಸ್ ದ್ವೀಪಕ್ಕೆ ನಾಲ್ಕು ಅಡಿ ಎತ್ತರದ ದೈತ್ಯ ಅಲೆಗಳು ಅಪ್ಪಳಿಸಿದ್ದರಿಂದ ವಿಶ್ವದ ಖ್ಯಾತ ಪ್ರವಾಸಿ ತಾಣಗಳಲ್ಲಿ ಒಂದಾದ ಮಾಲ್ಡೀವ್ಸ್‌ನ ಕಡಲ ತೀರಗಳಿಗೆ ದೊಡ್ಡ





## ಸುನಾಮಿ ಎಂದರೇನು?

ಸಾಗರದಲ್ಲಿ ಸಂಭವಿಸುವ ಭೂಕಂಪನ ಇಲ್ಲವೆ ಜ್ವಾಲಾಮುಖಿಯಿಂದ ಭುಗಿಲೇಳುವ ದೈತ್ಯ ಅಲೆಗಳ ಸರಣಿಯನ್ನು 'ಸುನಾಮಿ' ಎಂದು ಗುರುತಿಸಲಾಗುತ್ತದೆ.

ಸುನಾಮಿ ಎಂದರೇನು? ಎಂದು ಹುಡುಕಾಟ ನಡೆಸಿದಾಗ, ಇದರ ಮೂಲ ಜಪಾನಿ ಭಾಷೆಯಲ್ಲಿದೆ. ಇಲ್ಲಿ 'ಸು' ಅಂದರೆ ಬಂದರು. 'ನಾಮಿ' ಅಂದರೆ ಅಲೆಗಳು ಎಂದು ತಿಳಿದು ಬರುತ್ತದೆ.

ಸುನಾಮಿ ಇದು ಅಲೆಗಳ ಸರಣಿ. ಒಂದರ ಬೆನ್ನ ಹಿಂದೆ ಇನ್ನೊಂದು ಅಲೆಗಳು ಭುಗಿಲೇಳುತ್ತವೆ. ಇದಕ್ಕೆ ಭೂಕಂಪನ, ಜ್ವಾಲಾಮುಖಿ ಮಾತ್ರ ಕಾರಣವಾಗಿದೆ, ಭೂ ಕುಸಿತ, ಭಾರಿ ಸ್ಫೋಟಗಳೂ ಕಾರಣವಾಗಬಹುದು. ಅಷ್ಟೇ ಅಲ್ಲ ಅಂತರಿಕ್ಷದ ಅನಾಮಿಕ ಕಾಯಗಳ ಪ್ರಭಾವದಿಂದಲೂ ಇದು ಸಾಧ್ಯ ಎಂಬುದು ತಜ್ಞರ ಅನಿಸಿಕೆಯಾಗಿದೆ.

ಇತರೆ ಅಲೆಗಳಂತೆ ಸುಂಟರಗಾಳಿ, ಬಿರುಗಾಳಿಯಿಂದ ಇದು ಹುಟ್ಟಿಕೊಳ್ಳುವುದಿಲ್ಲ. ಇಲ್ಲಿಯ ಒಂದು ಅಲೆಯ ಉದ್ದ ಸುಮಾರು ನೂರು ಕಿ.ಮೀ. ಇರಬಹುದಾಗಿದೆ. ಅಲ್ಲದೆ ಅಲೆಗಳ ಅವಧಿ ಒಂದು ಗಂಟೆ, ಮಾಮೂಲಿ ಅಲೆಗಳ ಉದ್ದ ೧೫೦ ಮೀಟರ್ ಇರುತ್ತದೆ. ಭೂಮಿಯ ಒಳ ಪದರಿನಲ್ಲಿ ಸ್ವಲ್ಪ ವಿರೂಪ ಕಂಡುಬಂದರೆ ಭೂಕಂಪನ ಉಂಟಾಗುತ್ತದೆ. ಇದು ಸಾಗರದಾಳದಲ್ಲಿ ಉಂಟಾದರೆ, ಸಾಗರದ ನೀರಿನಲ್ಲಿ ಸಮತೋಲನ ಕಳೆದುಕೊಂಡು ಅಲ್ಲೋಲ ಕಲ್ಲೋಲ ವಾತಾವರಣ ಉಂಟಾಗುತ್ತದೆ.

ಸಮತೋಲನವನ್ನು ಉಳಿಸಿಕೊಳ್ಳಲು ಗುರುತ್ವಾಕರ್ಷಣ ಬಲದ ನೆರವಿನೊಂದಿಗೆ ನೀರಿನ ರಾಶಿ ಪ್ರಯತ್ನಿಸುತ್ತಿರುವಾಗಲೇ ಈ ರುದ್ರ ಭೀಕರ ಅಲೆಗಳು ಭುಗಿಲೇಳುತ್ತವೆ.

ಪ್ರಮಾಣದಲ್ಲಿ ಆಗಮಿಸಿದ್ದ ಪ್ರವಾಸಿಗಳು ತೊಂದರೆಗೆ ಒಳಗಾಗಿದ್ದಾರೆ. ಪರಿಸ್ಥಿತಿ ಗಂಭೀರವಾಗಿದೆ.

ಸುನಾಮಿ ಅಪ್ಪಳಿಸುವಿಕೆಗೆ ಒಳಗಾದ ನಮಗೆ ಪ್ರಾರ್ಥನೆಯ ಹೊರತು ಬೇರೊಂದು ದಾರಿ ಉಳಿದಿಲ್ಲ. ಹೊರಭಾಗದ ದ್ವೀಪ ಪ್ರದೇಶಗಳ ಪರಿಸ್ಥಿತಿ ಏನೆಂಬುದು ತಿಳಿದಿಲ್ಲ ಎಂದು ಅಧ್ಯಕ್ಷ ಮೌಮೂನ್ ಅಬ್ದುಲ್ ಗಯಾಮ್ ಹೇಳಿದ್ದಾರೆ. ಥಾಯ್ಲೆಂಡ್ ದೇಶದ ಉತ್ತರಕ್ಕೆ ೫ ರಿಂದ ೧೦ ಮೀಟರ್ ಎತ್ತರದ ಕಡಲ ಅಲೆಗಳು ಅಪ್ಪಳಿಸಿದ್ದರಿಂದ ಪ್ರವಾಸಿ ತಾಣವಾದ ಫುಕೆಟ್‌ನ ಸುಂದರ ಕಡಲತೀರಗಳು ತೀವ್ರ ಹಾನಿಗೆ ಒಳಗಾಗಿವೆ. ಹತ್ತುಸಾವಿರಕ್ಕೂ ಹೆಚ್ಚು ಜನರ ಆತಂಕಕ್ಕೆ ಒಳಗಾಗಿದ್ದಾರೆಂದು ವರದಿ ತಿಳಿಸಿದೆ.

ಸುನಾಮಿಯ ಹೊಡೆತಕ್ಕೆ ಸಿಲುಕಿ ಸಾವಿರಾರು ಜನ ಬಲಿಯಾದ ಇಂಡೋನೇಷ್ಯಾದಲ್ಲಿ ಅನಂತರ ೬೫ ಭಾರಿ ಭೂಕಂಪನಗಳು ಉಂಟಾಗಿವೆ. ಇವುಗಳಿಂದ ಯಾವುದೇ ಜೀವಹಾನಿಯಾಗಿಲ್ಲ. ಆದರೆ ಸಾವಿನ ಅಲೆಗಳ ಅಡಿಯಲ್ಲಿ ತಲ್ಲಣಿಸಿದ ಜನ ಈ ಕಂಪನಗಳಿಂದ ಇನ್ನಷ್ಟು ಕಂಗೆಟ್ಟು ಹೋಗಿದ್ದಾರೆ. ನೊಂದವರ ಆಕ್ರಂದನ ಎಲ್ಲೆಲ್ಲೂ ಮುಗಿಲು ಮುಟ್ಟಿದೆ. ಸತ್ತವರ ಸಂಖ್ಯೆ ಸುಮಾರ ೬೦ ಸಾವಿರಕ್ಕೂ ಮೀರಿದೆ ಎಂದು ಹೇಳಲಾಗುತ್ತಿದೆ.

### *ಐದನೇ ದುರಂತ*

ದಕ್ಷಿಣ ಏಷ್ಯಾವನ್ನು ನಡುಗಿಸಿದ ಈ ಭೂಕಂಪನ ೨೦ನೇ ಶತಮಾನದ ಆರಂಭದಿಂದಲೂ ಸಂಭವಿಸಿದ ಅತಿ ದೊಡ್ಡ ಭೂಕಂಪನಗಳಲ್ಲಿ ಒಂದಾಗಿದೆ ಎಂದು ಅಮೇರಿಕದ ಭೂವಿಜ್ಞಾನ ಸಮೀಕ್ಷೆ ಹೇಳಿದೆ.

೧೯೦೦ನೇ ಇಸ್ವಿಯಿಂದ ಈ ತನಕ ಸಂಭವಿಸಿದ ರುದ್ರ ಭೀಕರ ಭೂಕಂಪಗಳಲ್ಲಿ ಇದು ಐದನೇಯದಾಗಿದೆ. ಭೂಕಂಪನ ತೀವ್ರತೆ ರಿಕ್ಟರ್ ಮಾಪನದಲ್ಲಿ ೮.೯ ಇದ್ದು, ನಾವು ಅದನ್ನು ಈಗಷ್ಟೇ ದಾಖಲಿಸಿದ್ದೇವೆ ಎಂದು ಅಮೇರಿಕ ಭೂ ವಿಜ್ಞಾನ ಸರ್ವೇಕ್ಷಣಾಲಯದ ಭೂ ಭೌತ ವಿಜ್ಞಾನಿ ಜ್ಯೂಲಿ ಮಾರ್ಟಿನ್ ತಿಳಿಸಿದ್ದಾರೆ.

ಸಾಗರದ ಆಳದಲ್ಲಿ ಸಂಭವಿಸಿದ ಭಾರಿ ಭೂಕಂಪನ ಸಮುದ್ರದ ನೀರನ್ನು ಕಲುಕುತ್ತದೆ. ಇದರಿಂದ ಹೊರಡುವ ದೈತ್ಯ ಅಲೆಗಳು ಇಡೀ ಸಮುದ್ರವನ್ನು ವ್ಯಾಪಿಸುತ್ತವೆ ಎಂದು ವಿಜ್ಞಾನಿ ಬ್ರೂಸ್ ಪ್ರೆಸ್‌ಗ್ರೇವ್ ಅಭಿಪ್ರಾಯ ಪಡುತ್ತಾರೆ.

ಇಂತಹ ಭೂಕಂಪನ ಉಂಟಾಗುತ್ತದೆ ಎಂದು ಗ್ರಹಿಸಲು ಈ ತನಕ ಸಾಧ್ಯವಾಗಿಲ್ಲ ಎಂದೂ ಹೇಳುವ ಅವರು ಏಕಾಏಕಿ ಉಂಟಾಗುವ ಈ ಭೂಕಂಪನ ಸ್ವಲ್ಪ ಮೊದಲು ಲಘುವಾಗಿ ಯಾದರೂ ಕಂಪಿಸುವುದಿಲ್ಲ ಎಂದು ಹೇಳುತ್ತಾರೆ.

ಭೂಮಿ ತಿರುಗುತ್ತಿರುವಾಗ ಎಲ್ಲೋ ಒಂದು ಕಡೆ ಭೂತಟ್ಟೆಗಳು ಸ್ಪರ್ಶಿಸಿ ಮುರಿಯುತ್ತವೆ ಈ ಸಂದರ್ಭದಲ್ಲಿ ಭೂಮಿಯ ಹಲವಾರು ಭಾಗಗಳಲ್ಲಿ ಹಲವಾರು ಕಿ.ಮೀ. ವ್ಯಾಪ್ತಿಯಲ್ಲಿ ಒತ್ತಡ ಉಂಟಾಗುತ್ತದೆ. ಈ ಒತ್ತಡ ಮಿತಿ ಮೀರಿದಾಗ ಇನ್ನೊಂದು ಭೂಕಂಪನ ಉಂಟಾಗುತ್ತದೆ.

ಈ ತೆರನಾದ ಭೂಕಂಪನಗಳು ಕಾಣಿಸಿಕೊಳ್ಳುವ ಮುನ್ನ ಸುಳಿವು ಬಿಟ್ಟುಕೊಡದಿದ್ದರೂ ಒಂದು ಸಲ ಕಾಣಿಸಿಕೊಂಡ ಮೇಲೆ, ಅದೇ ಪ್ರದೇಶದಲ್ಲಿ ಮೇಲಿಂದ ಮೇಲೆ ಕಾಣಸಿ ಕೊಳ್ಳುತ್ತದೆ. ಹೀಗೆ ಗೋಚರಿಸುವ ಭೂಕಂಪನದ ತೀವ್ರತೆಯೂ ಸಾಮಾನ್ಯವಾಗಿ ಹೆಚ್ಚೇ ಆಗಿರುತ್ತದೆ. ಈ ಮೊದಲು ೭.೩ರಷ್ಟು ತೀವ್ರತೆಯ ಭೂಕಂಪನವನ್ನು ದಾಖಲಿಸಿ ಕೊಳ್ಳಲಾಗಿದೆ. ನಂತರ ೫ ರಿಂದ ೬ರಷ್ಟು ತೀವ್ರತೆಯ ಹಲವಾರು ಪ್ರಸಂಗಗಳು ಸೇರಿವೆ ಎಂದೂ ಮಾರ್ಟಿನ್ ಹೇಳುತ್ತಾರೆ.

### *ಕೈದಿಗಳ ಪರಾರಿ*

ಕೋಲಂಬೊದಲ್ಲಿ ಸಂಭವಿಸಿದ ಭೂಕಂಪನ ಸಂದರ್ಭ ದಲ್ಲಿ ಶ್ರೀಲಂಕಾದ ಮೂರುನೂರಕ್ಕೂ ಹೆಚ್ಚು ಹಾಗೂ ಜಕಾರ್ತಾದ ಎರಡು ನೂರಕ್ಕೂ ಹೆಚ್ಚು ಕೈದಿಗಳು ಕಾರಾಗೃಹ ದಿಂದ ಓಡಿ ಹೋಗಿದ್ದಾರೆ.

ಕೊಲಂಬೊದಾ ದಕ್ಷಿಣಕ್ಕೆ ೧೬೦ ಕಿ.ಮೀ. ದೂರದಲ್ಲಿರುವ ಮಾತ್ರಾ ದ್ವೀಪದ ಕಾರಾಗೃಹದಲ್ಲಿನ ೩೦೦ ಕೈದಿಗಳು ಪರಾರಿಯಾಗಿದ್ದು ನೀರಿನಿಂದ ಆವೃತವಾದ ಕಾರಾಗೃಹದಲ್ಲಿ ಏನು ಅನಾಹುತ ಸಂಭವಿಸಿದೆ ಎಂಬುದು ಗೊತ್ತಾಗಿಲ್ಲ. ೧೬ನೇ ಶತಮಾನದಲ್ಲಿ ಡಚ್ಚರ ಆಳ್ವಿಕೆಯಲ್ಲಿ ನಿರ್ಮಿಸಲಾದ ಈ ಕಾರಾಗೃಹ ಸಮುದ್ರ ನೀರಿನಲ್ಲಿ ಹಲವು ಮೀಟರ್‌ಗಳಷ್ಟು ಆಳದಲ್ಲಿದೆ ಎಂದು ಹೇಳಲಾಗಿದೆ.

### *ಅರಬ್ಬೀ ಸಮುದ್ರದಲ್ಲಿನ ಅಲೆಗಳ ಅಬ್ಬರ*

ಹಿಂದೂ ಮಹಾಸಾಗರದ ವ್ಯಾಪ್ತಿಯಲ್ಲಿ ಉಂಟಾದ ರುದ್ರ ಭೀಕರ ಭೂಕಂಪನ ಕರ್ನಾಟಕದ ಅರಬ್ಬಿ ಸಮುದ್ರ ವ್ಯಾಪ್ತಿಯಲ್ಲಿ ಅನೇಕ ಆತಂಕಗಳನ್ನು ದಾಖಲಿಸಿದೆ. ಡಿಸೆಂಬರ್ ೨೬ರ ರಾತ್ರಿ ೯.೩೦ರ ಸುಮಾರಿಗೆ ಭಾರಿ ಪ್ರಮಾಣದಲ್ಲಿ ಉಕ್ಕೇರತೊಡಗಿದ್ದು ಉತ್ತರ ಕನ್ನಡ ಜಿಲ್ಲೆಯ ಕರಾವಳಿಯ ಬಹುತೇಕ ಕಡೆ ತಗ್ಗು ಪ್ರದೇಶಗಳಿಗೆ ನೀರು ನುಗ್ಗಿದೆ.

ಕಾರವಾರದ ಖೈತಖೋಲ, ಮಾಜಾಳಿ, ೬೦ ಕೋಲಾದ ಬೆಲೇಕಿರಿ, ಕುಮುಟಾದ ತದಡಿ, ಹೊನ್ನವಾರ ಮತ್ತು ಭಟ್ಕಳದ ಕಡಲ ತೀರದ ಅನೇಕ ತಗ್ಗು ಪ್ರದೇಶಗಳು ಜಲಾವೃತಗೊಂಡಿವೆ. ಜಿಲ್ಲೆಯ ಕರಾವಳಿಯ ಜನರು ಕಟ್ಟೆಚ್ಚರದಿಂದಿದ್ದು ತೀವ್ರ ಆತಂಕದ ಭೀತಿ ಅವರನ್ನು ಆವರಿಸಿದೆ.

### *೭೫ ಜನರ ಸಾವು*

ದೇಶದ ಪೂರ್ವ ಕರಾವಳಿಯಲ್ಲಿ ಭಾನುವಾರ ಸಂಭವಿಸಿದ ಸುನಾಮಿಯಿಂದ ಉಂಟಾಗಿರುವ ದುರಂತದಲ್ಲಿ ಕರ್ನಾಟಕದ ಒಟ್ಟು ೭೫ ಜನರು ಮೃತಪಟ್ಟಿದ್ದಾರೆ.

(ಕೃಪೆ : ಸಂಯುಕ್ತ ಕರ್ನಾಟಕ) ★

### ಶ್ರದ್ಧಾಂಜಲಿ

ಡಿಸೆಂಬರ್ ೨೬ರಂದು ಕ್ರಿಸ್‌ಮಸ್ ಹಬ್ಬವನ್ನು ಸಂಭ್ರಮದಿಂದ ಆಚರಿಸಿ ಅದರ ಸವಿನೆನಪು ಮೆಲುಕುಹಾಕುತ್ತಿದ್ದವರಿಗೆ ಯಾವುದೇ ಮುನ್ಸೂಚನೆ ನೀಡದೆ ದಿಢೀರನೆ ಅಪ್ಪಳಿಸಿದ ಸುನಾಮಿಯಿಂದ ಜನರು ಜವರಾಯನ ಮನೆ ಸೇರುವಂತಾದುದು ದುಃಖದ ಸಂಗತಿ. ಪ್ರಕೃತಿಯ ವಿಕೋಪದ ಅಟ್ಟಹಾಸದ ಮುಂದೆ ಲಕ್ಷಾಂತರ ಜನರು ಸಾವಿಗೆ ಶರಣಾಗಬೇಕಾಯಿತು. ದುರ್ಘಟನೆಯಿಂದ ಸಾವನಪ್ಪಿದ ಎಲ್ಲರ ಆತ್ಮಕ್ಕೆ ಚಿರಶಾಂತಿಯನ್ನು ದಯಮಯನಾದ ಪರಶಿವನು ನೀಡಲೆಂದು ಹಾಗೂ ಬಂಧುಗಳನ್ನು ಕಳೆದುಕೊಂಡು ನಿರಾಶ್ರಿತರಾದವರಿಗೆ ದುಃಖವನ್ನುಸಹಿಸುವ ಶಕ್ತಿಯನ್ನು ನೀಡಲೆಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.







## ಶ್ರೀ ಸಿದ್ದೇಶ್ವರ ಪುರಾಣ

– ಕೋ.ರಂ. ಬಸವರಾಜು
ಪ್ರಾಧ್ಯಾಪಕರು,
ಶ್ರೀ ಸಿದ್ಧಗಂಗಾ ಸಂಸ್ಕೃತ ಕಾಲೇಜು,
ಶ್ರೀ ಸಿದ್ಧಗಂಗಾ ಕ್ಷೇತ್ರ

ಭಾಗ-೧೧

ಶ್ರೀ ಸಿದ್ಧಲಿಂಗೇಶ್ವರರು ಯೋಗಭೂಮಿಯಾದ ಕಗ್ಗೆರೆ ಸುಕ್ಷೇತ್ರ ದಲ್ಲಿ ಶಿವಯೋಗ ಸಮಾಧಿಯಿಂದ ಎಚ್ಚರಗೊಂಡು ಭಕ್ತರನ್ನು ಪೊರೆಯುತ್ತಾ ಲಿಂಗ ಸುಖದೊಳೊಪ್ಪಿರುತ್ತಾರೆ. ಅವರ ಧವಳಕೀರ್ತಿ ಲೋಕ-ಲೋಕಾಂತರದೊಳಗೆಲ್ಲಾ ಹಬ್ಬಲು, ನಾನಾ ದೇಶಗಳಿಂದ ಶರಣ ಸಾಧಕರು ಷಟ್‌ಸ್ಥಲಬ್ರಹ್ಮಿಗಳು ಬಂದು ಶಿಷ್ಯವೃತ್ತಿಯನ್ನು ಸ್ವೀಕರಿಸುತ್ತಾರೆ. ಅಂಥವರಲ್ಲಿ ಪಟ್ಟಣದ ದೇವ (ಪ್ರಾಯಃ ದೇವರಾಯಪಟ್ಟಣದ ಶಂಕರದೇವ) ಚೋಳಬಸವಾರ್ಯ ಸಪ್ಪೆಯಾರ್ಯ, ಸಿದ್ಧಮಲ್ಲೇಶ, ಘಟ್ಟಿಸಿದ್ಧಯ್ಯ, ಉಪ್ಪಿನಹಳ್ಳಿ ಅಯ್ಯ, ರಾಚೋಟಯ್ಯ, ಚಿಟ್ಟಿಗಯ್ಯ, ಚಂದ್ರಶೇಖರದೇವ, ಕಟ್ಟೆಯ ಪುರದ ನಂಜದೇವ, ಘನಲಿಂಗಿದೇವ ಗುಮ್ಮಾಳಪುರದ ಸಿದ್ಧಲಿಂಗಯತಿ, ಶೀಲವಂತೇಶ್ವರ, ಹುಚ್ಚುಪರ್ವತೇಶ, ಕಾಲಹರಣ ಕಂಕದದೇವ, ದೊಡ್ಡಸಿದ್ಧಪ್ಪ ಮುಂತಾದವರು ಪ್ರಸಿದ್ಧರು. ಇವರೇ ಮುಂತಾದವರು ಮುಂದೆ ೧೦೧ ವಿರತರೆಂಬ ಹೆಸರಿನಿಂದ ಸಿದ್ಧಲಿಂಗೇಶ್ವರರ ಜೊತೆಯಲ್ಲಿ ಸಂಚರಿಸುತ್ತಾರೆ. ಇವರಲ್ಲದೆ ನಾಡಿನ ನಾನಾ ಮೂಲೆಗಳಿಂದ ಶೀಲವ್ರತರು, ತೀರ್ಥಪ್ರಸಾದಿಗಳು, ಮುಮುಕ್ಷುಗಳು ನೂರಾರು ಸಂಖ್ಯೆಯಲ್ಲಿ ಗುರುದರ್ಶನೋಪದೇಶವನ್ನರಸಿಕೊಂಡು ಕಗ್ಗೆರೆಗೆ ಬರುತ್ತಾರೆ. ಅವರೆಲ್ಲರಿಗೂ ಶ್ರೀ ಸಿದ್ಧಲಿಂಗೇಶ್ವರರು ಶ್ರೀ ವೀರಶೈವಾಗಮಗಳನ್ನು ಬೋಧಿಸುತ್ತಾ ವೀರಶೈವಮತ ರಹಸ್ಯವನ್ನು ಅರುಹಿ ಉದ್ಧಾರ ಮಾಡುತ್ತಾರೆ.

ಹೀಗೊಂದು ದಿವಸ ಆ ಕಗ್ಗೆರೆಯ ಹೂದೋಟದಲ್ಲಿ ಈ ಸಕಲವೀರಮಾಹೇಶ್ವರರೊಡನೆ ಶಿವಯೋಗಿಗಳು ಶಿವತತ್ತ್ವಾನುಭವ ಗೋಷ್ಠಿಯಲ್ಲಿ ತೊಡಗಿರುವಾಗ ಘಟನೆಯೊಂದು ನಡೆಯುತ್ತದೆ : ಲೋಕದಲ್ಲಿ ಶ್ರುತಿಮತಿಯಲ್ಲದ ನಾಲಗೆಶುದ್ಧವಿಲ್ಲದ ವಿಷಯಮುಖನಾದ ವಕ್ರತಿಯುಳ್ಳ ನೀಚ ಮನುಷ್ಯನೊಬ್ಬನು ಕೊನೆಯಲ್ಲಿ ಅರಿವುಂಟಾಗಿ ಮುಕ್ತನಾಗಲು ಶಿವಯೋಗಿಯ ದಿವ್ಯ ಪಾದವನ್ನು ಹೇಗೆ ಹಿಡಿಯುವನೋ ಹಾಗೆಯೇ ಕಿವಿಯಿಲ್ಲದ ಎರಡು ನಾಲಗೆಯುಳ್ಳ ಮುಖದಲ್ಲಿ ವಿಷತುಂಬಿರುವ ಘೋರ ಸರ್ಪವೊಂದು ಎಲ್ಲಿಂದಲೋ ಹರಿದು ಬಂದು ಶಿವಯೋಗಿಯ ಪಾದದ ಮೇಲೆರಗಿ ಅಂಗುಷ್ಠದಲ್ಲಿ ಕರಣಾಮೃತವನ್ನು ಈಂಟಿ ಬದುಕುವೆನೆಂಬ ಬುದ್ಧಿಯಿಂದೆಂಬಂತೆ ಹಲ್ಲಿನಿಂದ ಕಚ್ಚಿ ಅಡಿಹೊಟ್ಟೆಯಾಗಿ ಹೊರಳಿ ವಿಷಬಿಟ್ಟು ಎಲ್ಲರೆದುರಿಗೇ ಸತ್ತುಹೋಯಿತು. ಆ ಶಿವಯೋಗಿಗಳು ಈ ರೀತಿಯಾಗಿ ತನ್ನ ಅಂಗುಷ್ಠವನ್ನು ಕಚ್ಚಿ ಮರಣ ಪಡೆದ ಹಾವಿನ ಹತ್ತಿರ ಹೋಗಿ 'ಎಲೈ! ಶಿವಯೋಗಿಗಳ ದೇಹದಲ್ಲಿ ಚಿದ್ರಸಹರಿಯುತ್ತದೆ. ಪಾದಾಂಗುಷ್ಠದಲ್ಲಿ ,ಅಷ್ಟಾಷಷ್ಠಿತೀರ್ಥಗಳಿವೆ ಎಂಬುದು ಲೋಕವಿದಿತ, ಶಾಸ್ತ್ರಸಿದ್ಧ. ಹೀಗಿರುವಾಗ ನೀನೆನ್ನ ಹೆಬ್ಬೆರಳನ್ನೂ ಕಚ್ಚಿ ಅಮೃತವನ್ನೀಂಟಬಹುದಲ್ಲದೆ ಸಾಯುವುದಾದರೂ ಹೇಗೆ ಸಾಧ್ಯ? ಹೀಗೆ ಸಾಯುವುದುಚಿತವೆ? ನೀನೇಳು ಶಂಕರನಾಭರಣ ಎಂದೆನುತ್ತಾ ತಮ್ಮ ಶಿವ ಹಸ್ತದಿಂದ ಆ ಸತ್ತ ಹಾವಿನ ಮೈಯನ್ನು ನೇವರಿಸುತ್ತಾರೆ. ತಕ್ಷಣವೇ ಹಾವಿನ ಮೈಯಲ್ಲಿ ಪ್ರಾಣಸಂಚಾರವಾಗಿ ಹೊರಳಾಡಿ ಮೈಮುರಿದೇಳು ತ್ತದೆ. ಎದ್ದು ಹೆಡೆಎತ್ತಿ ಶಿವಯೋಗಿಯನ್ನು ಬಲಗಂದು ಸಮೀಪದಲ್ಲಿದ್ದ ಹುತ್ತದೊಳಕ್ಕೆ ಹರಿದುಹೋಗುತ್ತದೆ. ನೆರೆದಿದ್ದವರೆಲ್ಲರೂ ಈ ಅಚ್ಚರಿಯನ್ನು ನೋಡಿ ಹಿಂದೆ ಬಸವೇಶ್ವರರು ಹಾವಿನ ಹಾಳಕಲ್ಲಯ್ಯ, ಭೈರವೇಶ್ವರ ಮುಂತಾದವರು ಸತ್ತ ಹಾವಿಗೆ ಹರಣವಕೊಟ್ಟ ಸಂಗತಿಯನ್ನು ಸ್ಮರಿಸುತ್ತಾ ಶಿವಯೋಗಿಗಳ ಜೀವಕಾರುಣ್ಯವನ್ನು ಕೊಂಡಾಡುತ್ತಾರೆ.

ಮತ್ತೊಂದು ದಿನಸ ಅದೇ ಪುಷ್ಪವಾಟಿಕೆಯಲ್ಲಿ ಶಿವಾನುಭವ ಮಾಡುತ್ತಿರುವಾಗ ಮತ್ತೊಂದು ಘಟನೆ ಜರುಗುತ್ತದೆ. ಭೂತಗಳೆರಡು ಬಂದು ಶಿವಯೋಗಿಯ ಅಡಿಗೆರಗಿ 'ಗುರುವೇ! ಮಹಾದೇವ! ನಿಮ್ಮ ಪಾದಸೇವೆಯನ್ನು ಮಾಡಿಕೊಂಡು ಮುಕ್ತರಾಗಬೇಕೆಂದು ನೇಮಮಾಡಿ ಕೊಂಡಿದ್ದೇವೆ. ಕೃಪೆಮಾಡಿ ಒಪ್ಪಿಗೆ ಕೊಡಬೇಕು. ನಮ್ಮ ಸೇವೆಯನ್ನು ಅಂಗೀಕರಿಸಬೇಕು' ಎಂಬುದಾಗಿ ಪ್ರಾರ್ಥಿಸುತ್ತವೆ. ಶಿವಯೋಗಿಗಳು ಆಗಲೆಂದು ಅವಕಾಶ ಮಾಡಿಕೊಡುತ್ತಾರೆ. ಅನಂತರ ಹನ್ನೆರಡು ವರ್ಷಗಳ ಕಾಲ ನಿರಂತರವಾಗಿ ಆ ಎರಡು ಭೂತಗಳೂ ಶಿವಯೋಗಿಯ ಪಾದಸೇವೆ ಮಾಡಿ ಅಂದು ದಿವ್ಯ ದೇಹಧರಿಸಿ ಕೈಲಾಸಕ್ಕೆ ಹೋದವು. ಇದನ್ನು ನೋಡಿ ವಿರತರಿಗೆ ಭಕ್ತರಿಗೆಲ್ಲಾ ಆಶ್ಚರ್ಯವಾಗುತ್ತದೆ. ಎಲ್ಲರ ಪರವಾಗಿ ಬೋಳಬಸವಾರ್ಯನು ಇದರ ಮೂಲವನ್ನು ತಿಳಿಹೇಳಬೇಕೆಂದು ಗುರುಗಳನ್ನು ಎಲ್ಲರ ಪರವಾಗಿ ಕೇಳುತ್ತಾನೆ. ಆಗ ಸಿದ್ಧಲಿಂಗೇಶ್ವರರು ನಸು ನಕ್ಕು ವಿವರಿಸುತ್ತಾರೆ : ಹಿಂದೆ ಪೂರ್ಣಾನಂದನೆಂಬ ಮಹಾಮಹಿಮ ಶಾಲಿಯಾದ ಮುನಿಯು ಇಲ್ಲಿ ಆಶ್ರಮವೊಂದರಲ್ಲಿ ವಾಸವಾಗಿದ್ದನು. ಒಂದು ಸಾರಿ ಚಿತ್ರ ಸೇನನೆಂಬ ಗಂಧರ್ವನು ತನ್ನ ಸತಿಯೊಡನೆ ಪೂರ್ಣಾನಂದನ ಆಶ್ರಮಕ್ಕೆ ಬಂದು ಮುನಿಗೆ ವಂದಿಸಿ ನಂತರ ತಪೋಭೂಮಿಯಲ್ಲಿ ಪ್ರಿಯತಮೆಯೊಡನೆ ಸುತ್ತಾಡುತ್ತಾನೆ. ರಮ್ಯವಾದ ಪ್ರಕೃತಿಯಿಂದ ಪ್ರೇರಿತನಾಗಿ ಋಷ್ಯಾಶ್ರಮವೆಂಬುದನ್ನು ಮರೆತು ಸತಿಯೊಡನೆ ರತಿ ಕ್ರೀಡೆಯಾಡುತ್ತಾನೆ. ದುರ್ವಿಧಿಯಿಂದ ಮುನಿಗಳ ಕಣ್ಣಿಗೆ

ಬೀಳುತ್ತಾರೆ. ಕೂಡಲೇ ಮುನಿಗೆ ಕೋಪ ಉಕ್ಕೇರಿ ಕನಲಿ ಘುಡುಘುಡಿಸುತ್ತಾ (ಎಲೈ ಪಾತಕಿಯೆ! ಋಷ್ಯಾಶ್ರಮಗಳಲ್ಲಿ ಬ್ರಹ್ಮಚರ್ಯೆಯ ಭೂಮಿಯಲ್ಲಿ ಇಂತು ರತಿಸುಖವ ಮಾಡಬಹುದೆ? ಈ ಘೋರಾಪರಾಧಕ್ಕಾಗಿ ಸತಿಸಹಿತನಾಗಿ ನೀನು ಭೂಲೋಕದಲ್ಲಿ ಭೂತಜನ್ಮಪಡೆ' ಎಂದು ಶಪಿಸಿದರು : ಆ ಚಿತ್ರಸೇನನು 'ಸ್ವಾಮಿ! ಅರಿಯದೆ ಎನ್ನಿಂದ ತಪ್ಪು ನಡೆದು ಹೋಯಿತು. ನನ್ನನ್ನು ಕಾಪಾಡು. ನನಗೆ ಶಾಪವಿಮೋಚನೆಯೇ ಇಲ್ಲವೆ?' ಎಂದು ನಡುನಡುಗುತ್ತಾ ಶಿವಯೋಗಿಯ ಪಾದದಲ್ಲಿ ಮೈಯೀಡಾಡುತ್ತಾನೆ. ಆಗ ಸಿದ್ಧಲಿಂಗೇಶ್ವರರು 'ಎಲೈ ಗಂಧರ್ವನೆ! ಮುಂದೆ ಶಿವಯೋಗಿ ಪುಂಗವರಾದ ಶ್ರೀಸಿದ್ಧಲಿಂಗೇಶ್ವರರು ಕಗ್ಗೆರೆ ಕ್ಷೇತ್ರಕ್ಕೆ ಬಂದು ಶಿವಯೋಗವನ್ನಾಚರಿಸುವರು. ಆಗ ಆ ಮಹಾಮಹಿಮ ತೋಂಟದಾರ್ಯನ ಸೇವೆಯನ್ನು ೧೨ ವರ್ಷಗಳು ಭೂತಂಗಳಾಗಿ ಮಾಡುವುದರಿಂದ ಶಾಪವಿಮೋಚನೆಯಾಗಿ ಮೊದಲಿನಂತಾಗುವೆ' ಎಂದು ವಿಮೋಚನಾಪಾಯವನ್ನು ತಿಳಿಸಿ ಹರಸಿದನು. ಹೀಗೆ ಆ ಪೂರ್ಣಾನಂದನ ಶಾಪಕ್ಕೆ ಗುರಿಯಾದ ಈ ಭೂತಗಳು ನನ್ನ ಸೇವೆ ಮಾಡಿ ಮೋಕ್ಷ ಪಡೆದು ಕೈಲಾಸಕ್ಕೆ ತೆರಳಿದವು ಎಂಬುದಾಗಿ ಪಿಶಾಚಿಗಳ ವೃತ್ತಾಂತವನ್ನು ಹೇಳಿದರು. ಮತ್ತು ಹಿಂದೆ ಉದ್ಧಟಯ್ಯನ ದೆಸೆಯಿಂದ (ಹೊಗೆಯಿಂದ) ಹನ್ನೆರಡು ವರ್ಷಗಳು ಕಾಯ್ದುಕೊಂಡಿದ್ದ ಏಳುನೂರು ಭೂತಗಳೂ ಕೈಲಾಸಕ್ಕೆ ಹೋದ ಪುರಾತನ ಸಂಗತಿಯನ್ನು ವಿವರಿಸಿ ಬೋಧಿಸಿದರು.

ಹೀಗೆ ಭಕ್ತರಬೀಡಾದ ಕಗ್ಗೆರೆಯಲ್ಲಿಯೇ ಇರುವಾಗ ಒಂದು ದಿವಸ ಆವೂರ ನಂಬ್ಯಂಣ ಸೆಟ್ಟಿಯ ಮನೆಯದಾಸಿಗೆ ನಾನೂ ಶಿವಯೋಗಿಗೆ ಏನನ್ನಾದರೂ ಅರ್ಪಿಸಬೇಕೆನ್ನುವ ಮನದಾಸೆ ಉಂಟಾಗುತ್ತದೆ. ಆಗ ಮನೆಯೊಡತಿಯನ್ನು ಕೇಳದೆ ಕಂದಲಲ್ಲಿದ್ದ (ಪಾತ್ರೆ) ಹಸುವಿನ ಹಾಲನ್ನು ಕೆಂಪಗೆ ರುಚಿ ಬರುವಂತೆ ಕಾಯಿಸಿ ತಂದು ಶಿವಯೋಗಿಯ ಮುಂದಿಟ್ಟು ಲಿಂಗಾರ್ಪಿತಮಾಡಬೇಕೆಂದು ಪ್ರಾರ್ಥಿಸುತ್ತಾಳೆ. ಇದರ ಹಿನ್ನೆಲೆ ಅರಿವಿಗೆ ಬಂದು ಕ್ಷಣಕಾಲ ಮುಗ್ಧದಾಸಿಯ ಭಕ್ತಿಯನ್ನು ಕೈಕೊಳ್ಳದೆ ಬೇಡವೆನ್ನುತ್ತಾರೆ. ಆಗ ಆ ದಾಸಿಯು ''ಹೇ ಸ್ವಾಮಿ! ದಾಸಿಯ ಭಕ್ತಿಯನ್ನು ಮುಟ್ಟಬಾರದೆಂಬುದಾಗಿ ಶಾಸ್ತ್ರನಿಯಮವೇನಾದರೂ ಉಂಟೋ? ಒಡತಿಯಪ್ಪಣೆಯಿಲ್ಲದೆ ತಂದರ್ಪಿಸಿದ್ದಾಳೆಂಬ ಮುನಿಸೋ? ಕೊಡಗೂಸು ತಂದ ಹಾಲನ್ನು ಕುಡಿಯನೇ ಶಿವನು? ಮೃಡಭಕ್ತೆ ಕಾಳವ್ವೆ ಕಲ್ಲಿನ ಗೋವಿನಲ್ಲಿ ಹಾಲು ಕರೆದು ತಲೆತಯೋಡಿನಲ್ಲಿ ತಂದರ್ಪಿಸಿದುದನ್ನು ಕುಡಿಯನೆ ಶಿವನೂ ಎಂದು ಪರಿಪರಿಯಾಗಿ ಪ್ರಾರ್ಥಿಸುತ್ತಾಳೆ. ಆಗ ಶಿವಯೋಗಿಗಳು ಅವಳ ಭಕ್ತಿಗೆ ಮೆಚ್ಚಿ ಹಾಲನ್ನು ಲಿಂಗಾರ್ಪಿತಮಾಡುತ್ತಾರೆ. ದಾಸಿ ಸಂತೋಷಗೊಂಡು ಒಡೆಯನ ಮನೆಗೆ ಬರುತ್ತಾಳೆ. ಇತ್ತ ನಂಬ್ಯಂಣ್ಣನ ಮನೆಯೊಡತಿ ಪಾತ್ರೆಯಲ್ಲಿ ಹಾಲು ಇಲ್ಲದುದನ್ನು ಕಂಡು ದಾಸಿಯನ್ನು ಏನಾಯಿತೆಂದು ಗದ್ದರಿಸಿ ಕೇಳುತ್ತಾಳೆ. ಆಗ ಸಿದ್ದೇಶ್ವರನಿಗೆ ಕೊಂಡು ಹೋಗಿ ಅರ್ಪಿಸಿದೆ ಎಂದು ನಿಜವನ್ನು ನುಡಿಯುತ್ತಾಳೆ. ಅದರಿಂದ ಕೋಪಗೊಂಡ ಒಡತಿ ದಾಸಿಯನ್ನು ಮುನಿದು ಜಡಿಜಡಿಯುತ್ತಾಳೆ. ಅಂದಿನ ರಾತ್ರಿ ನಂಬ್ಯಂಣನ ಹಸುಗಳೆಲ್ಲಾ ಕರೆದಾಗ ಹಾಲಿಗೆ ಬದಲಾಗಿ ರಕ್ತವನ್ನು ಕರೆಯುತ್ತವೆ. ಅದನ್ನು ನಂಬ್ಯಂಣ ನೋಡಿ ಮನೆಯಲ್ಲಿ ಏನೋ ಅಚಾತುರ್ಯ ಹಾಗೂ ಅಪರಾಧ ನಡೆದಿದೆ ಎಂದು ಶಂಕಿಸಿ ಹೆಂಡತಿಯನ್ನು ಕೇಳುತ್ತಾನೆ. ಆಗ ಆಕೆ ದಾಸಿಯನ್ನು ಜಡಿದದ್ದು, ಅದಕ್ಕೆ ಕಾರಣ ಎಲ್ಲವನ್ನೂ ಗಂಡನಿಗೆ ಹೇಳುತ್ತಾಳೆ. ಆಗ ಓಹೋ! ಗುರುದ್ರೋಹವಾಯ್ತು ಎಂದು ಮನದಲ್ಲೆ ಗುರುವಿಗೆ ಹರಕೆ ಹೊರುತ್ತಾನೆ. ಬೆಳಿಗ್ಗೆ ಎಂದಿನಂತೆ ಗೋವುಗಳೆಲ್ಲಾ ಹಾಲನ್ನೇ ಕರೆಯುತ್ತವೆ. ಅದೆಲ್ಲವನ್ನೂ ಕಾಯಿಸಿ ಸತಿಯೊಡನೆ ತೆಗೆದುಕೊಂಡುಹೋಗಿ ನಂಬ್ಯಂಣ ಸಿದ್ಧಲಿಂಗೇಶ್ವರರಿಗೆ ಅರ್ಪಣಮಾಡುತ್ತಾರೆ. ಸತಿಯ ಅಪರಾಧವನ್ನು ಮನ್ನಿಸಿ ಕಾಪಾಡುವಂತೆ ಪ್ರಾರ್ಥಿಸುತ್ತಾನೆ. ಶಿವಯೋಗಿಗಳು ಆಶೀರ್ವದಿಸಿ ಕಳುಹಿಸುತ್ತಾರೆ. ನಂಬ್ಯಂಣನ ಮನೆಯ ಹಸುಗಳು ಎಂದಿಗಿಂತ ಅಧಿಕವಾಗಿ ಅಮೃತವನ್ನು ಕರೆಯುತ್ತವೆ. ಎಲ್ಲರೂ ಶ್ರೀಗುರುವನ್ನು ಕೊಂಡಾಡಿ ಸುಖಸಂತೋಷದಿಂದಿರುತ್ತಾರೆ.

*ವಿಶೇಷ ವಿಚಾರ*

೧. ಈ ಸಿದ್ದೇಶ್ವರ ಪುರಾಣದ ಪ್ರಕಾರ ಶ್ರಿ ಸಿದ್ಧಲಿಂಗೇಶ್ವರರು ಗೋಸಲ ಚನ್ನಬಸವೇಶ್ವರರಿಂದ ಜಂಗಮ ದೀಕ್ಷೆ ಪಡೆದು ಚರಮೂರ್ತಿಯಾಗಿ ದೇಶ ಸಂಚಾರ ಹೊರಟದ್ದು ಒಬ್ಬಂಟಿಗರಾಗಿಯೇ. ಅವರನ್ನು ಶಿಷ್ಯವೃಂದ ಹೊಂದಿದ್ದು ಕಗ್ಗೆರೆ ಕ್ಷೇತ್ರದಲ್ಲಿ. ಅಲ್ಲಿಂದ ಮುಂದೆ ಆ ವಿರತರೊಡನೆ ದೇಶ ಸಂಚಾರವನ್ನು ಕೈಗೊಳ್ಳುತ್ತಾರೆ. ಶ್ರೀ ಸಿದ್ಧಗಂಗಾ ಕ್ಷೇತಕ್ಕೆ ಬರುವ ಹೊತ್ತಿಗೆ ಶಿಷ್ಯರ ಸಮೇತರಾಗಿ ಬರುತ್ತಾರೆ. ೨. ಶ್ರೀ ಸಿದ್ಧಲಿಂಗೇಶ್ವರರಲ್ಲಿ ಶಿಷ್ಯವೃತ್ತಿಯನ್ನು ಕೈಗೊಂಡರಲ್ಲಿ ಗುರುಪರಂಪರೆಯವರೂ ಇದ್ದುದೊಂದು ವಿಶೇಷ.

★

## ಶ್ರೀವಾಣಿ

ವ್ಯಾಸಂಗಕ್ಕೆ ಪುಸ್ತಕ, ಬಟ್ಟೆ, ಹಣ, ಆಹಾರ, ಇತರ ಅನುಕೂಲಗಳು ಮುಖ್ಯವಲ್ಲ. ಇವು ವಿದ್ಯಾರ್ಥಿಯ ಬದುಕಿನಲ್ಲಿ ಎರಡನೆಯ ಸ್ಥಾನವನ್ನು ಪಡೆಯುತ್ತವೆ. ಮನಸ್ಸಿಗೆ ಮೊದಲ ಸ್ಥಾನ. ಮನಸ್ಸೊಂದಿದ್ದರೆ ಜ್ಞಾನ ಸಂಪಾದನೆ ಬಹಳ ಸುಲಭ. ಎಂತಹ ಅಡ್ಡಿಗಳು ಬಂದರೂ ದೃಢವಾದ ಮನಸ್ಸು ಧೈರ್ಯಗುಂದದೆ ಸದಾ ವ್ಯಾಸಂಗ ನಿರತವಾಗಿರುತ್ತದೆ. ಇದಕ್ಕೆ ವಾರಾನ್ನಮಾಡಿ ವ್ಯಾಸಂಗಮಾಡಿದ ಮಕ್ಕಳು, ಬೀದಿ ಕಂಬದ ದೀಪದಡಿ ಓದಿದ ಮಕ್ಕಳು, ತಿರಿದು ಗಂಜಿ ಕುಡಿದು ಅಭ್ಯಾಸ ಮಾಡಿದ ಮಕ್ಕಳು ಇಂದು ದೊಡ್ಡ ದೊಡ್ಡ ವಿದ್ವಾಂಸರಾಗಿ ನಾಡಿನ ಮೂಲೆ ಮೂಲೆಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿರುವುದೇ ಸಾಕ್ಷಿ.





# ವಿವಿಧ ಧರ್ಮಗಳಿಂದ ಮಾಂಸಾಹಾರದ ನಿಷೇಧ

ಮೂಲ : ಗೋಪೀನಾಥ ಅಗರ್‌ವಾಲ
ಅನುವಾದ : ಎಸ್.ಎಸ್. ಶಾರದಾಪ್ರಸಾದ್
ಅಸೋಸಿಯೇಷನ್ ಆಫ್ ವೆಜಿಟೇರಿಯನ್ಸ್,
ದಾವಣಗೆರೆ.

ಪ್ರಪಂಚದ ಎಲ್ಲ ಕಡೆಗಳಲ್ಲಿನ ಎಲ್ಲಾ ಧರ್ಮಗಳ ಶಾಸ್ತ್ರಗ್ರಂಥಗಳು ಪ್ರತಿ ಜೀವಿಯಲ್ಲಿಯೂ ದೈವಾಂಶದ ಪ್ರತಿರೂಪವನ್ನು ಕಾಣಬೇಕೆಂದು ಬೋಧಿಸಿವೆ ಮತ್ತು ಅಹಿಂಸೆಯೇ ಅತ್ಯುತ್ತಮ ಧರ್ಮವೆಂದೂ ಪರಿಗಣಿಸಿವೆ. ಮಾಂಸಭಕ್ಷಣೆಯಿಂದ ಆಗುವಂಥ ಹಾನಿಗಳನ್ನು ಹೆಚ್ಚಿನ ಧರ್ಮಗಳು ವಿವರಿಸಿವೆ; ಅದನ್ನು ದೀರ್ಘಾಯುಷ್ಯದ ಶತ್ರುವೆಂದೂ, ಅವನತಿಯ ಕಾರಣವೆಂದೂ ಪರಿಗಣಿಸಿವೆ. ಆರೆ ನಿರುಪದ್ರವಿ ಹಾಗೂ ಮುಗ್ಧವಾದ ಯಾವುದೇ ಜೀವಿಯನ್ನು ಕೊಲ್ಲುವುದನ್ನು ಎಲ್ಲ ಧರ್ಮಗಳೂ ನಿಷೇಧಿಸಿವೆ. ತಮ್ಮ ಹಸಿವನ್ನು ತೃಪ್ತಿಪಡಿಸಿಕೊಳ್ಳುವುದೇ ತಮ್ಮ ಜೀವನದ ಪರಮಧ್ಯೇಯವೆಂದು ಪರಿಗಣಿಸುವ ಕೆಲವರು ತಮ್ಮ ಸ್ವಂತ ಹಿತಾಸಕ್ತಿ, ಸ್ವಾರ್ಥಸಾಧನೆಗಾಗಿ ತಾವು ಮಾಂಸ ತಿನ್ನುವುದನ್ನು ತಮ್ಮ ಧರ್ಮ ನಿಷೇಧಿಸುವುದಿಲ್ಲ ಎಂದು ಸಮರ್ಥಿಸಿಕೊಳ್ಳಲು ಪ್ರಯತ್ನಿಸುವರು; ಆದರೆ ಅದು ನಿಜವಲ್ಲವೇ ಅಲ್ಲ.

*ಹಿಂದೂ ಧರ್ಮ*

ಹಿಂದೂ ಧರ್ಮದ ಎಲ್ಲ ಧರ್ಮಶಾಸ್ತ್ರ ಗ್ರಂಥಗಳು ಪ್ರತಿಯೊಂದು ಜೀವಿಯೂ ದೈವಾಂಶಸಂಭೂತವೆಂದೂ ಪರಿಗಣಿಸುತ್ತವೆ; ಅವು ಅಹಿಂಸೆ, ದಯೆ, ಪ್ರೀತಿ, ಕ್ಷಮೆ ಮತ್ತಿತರ ಸದ್ಗುಣಗಳ ಬಗ್ಗೆ ಅತ್ಯಂತ ಹೆಚ್ಚಿನ ಪ್ರಾಧಾನ್ಯ ನೀಡುತ್ತವೆ. ಮಾಂಸಭಕ್ಷಣೆಯನ್ನು ಸಂಪೂರ್ಣವಾಗಿ ತ್ಯಜಿಸಬೇಕಾದುದೆಂದೂ, ಪಾಪಕರವೆಂದೂ ಮತ್ತು ಆತ್ಮದ ಅವನತಿಗೆ ಕಾರಣವಾದುದೆಂದೂ ವಿವರಿಸಿವೆ. ಮಹಾಭಾರತದ ಅನುಶಾಸನ ಪರ್ವದಲ್ಲಿ ಭೀಷ್ಮ ಪಿತಾಮಹನು ಈ ರೀತಿ ವಿವರಿಸಿರುವನು; ಮಾಂಸ ತಿನ್ನುವವರು, ಮಾಂಸ ವ್ಯಾಪಾರ ಮಾಡುವವರು ಹಾಗೂ ಮಾಂಸಕ್ಕಾಗಿ ಪ್ರಾಣಿಗಳನ್ನು ಕೊಲ್ಲುವವರು ಪರಮಪಾಪಿಗಳು. ಇತರ ಜೀವಿಗಳ ಮಾಂಸಸೇವನೆಯಿಂದ ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಲು ಅಪೇಕ್ಷಿಸುವಂಥ ಯಾವುದೇ ವ್ಯಕ್ತಿಯು ಎಲ್ಲಿಯೇ ಜನಿಸಿರಲಿ, ಎಂದಿಗೂ ಶಾಂತಿ ನೆಮ್ಮದಿಗಳಿಂದ ಜೀವಿಸಲಾರನು - ಎಂದೂ ವಿವರಿಸಿರುವನು. ಇತರ ಜೀವಿಗಳ ಮಾಂಸವನ್ನು ತಿನ್ನುವವರನ್ನು ಮುಂದಿನ ಜನ್ಮದಲ್ಲಿ ಆ ಜೀವಿಗಳೇ ತಿಂದು ಹಾಕುವುವು; ಹತ್ಯೆಗೆ ಒಳಗಾದ ಯಾವುದೇ ಜೀವಿಯು ಈ ರೀತಿ ಶಪಿಸುತ್ತದೆ.

*ಮಾಂ ಭಕ್ಷ್ಯತೇ ಯಸ್ಮಾದ್ ಭಕ್ಷಿಷ್ಯೇ ತಮಪ್ಯಹಮ್ ॥*

ಎಂದರೆ ''ಇದು, ಅವನು ಭಕ್ಷಿಸುವವನು, ಒಂದಲ್ಲ ಒಂದು ದಿನ ನಾನು ಅವನನ್ನು ಭಕ್ಷಿಸುವೆನು''

ಶ್ರೀಮದ್ಭಗದ್ಗೀತೆ ಕೂಡ ಮೂರು ಬಗೆಯ ಆಹಾರವನ್ನು ಗುರುತಿಸುತ್ತದೆ.

*ಸಾತ್ವಿಕ ಆಹಾರ*

ಹಣ್ಣು ತರಕಾರಿಗಳು, ಬೇಳೆಕಾಳುಗಳು, ಧಾನ್ಯಗಳು, ಹಾಲು, ಬೆಣ್ಣೆ ಇತ್ಯಾದಿ. ಇವು ದೀರ್ಘಾಯುಷ್ಯವನ್ನು ನೀಡುತ್ತವೆ, ಧೀಶಕ್ತಿಯನ್ನು ವೃದ್ಧಿಸುತ್ತವೆ, ಶಕ್ತಿಯನ್ನು ನೀಡುತ್ತವೆ; ಆನಂದ, ಶಾಂತಚಿತ್ತತೆ, ದಯೆ, ಅಹಿಂಸಾಭಾವನೆ ಹಾಗೂ ಚಿತ್ತಸಮಸ್ಥಿತಿಯನ್ನು ನೀಡಿ, ದೇಹ, ಬುದ್ಧಿ ಹಾಗೂ ಮನಸ್ಸುಗಳನ್ನು ಎಲ್ಲ ರೀತಿಯ ಕಲ್ಮಷಾದಿಗಳಿಂದ ರಕ್ಷಿಸುತ್ತವೆ.

*ರಾಜಸ ಆಹಾರ*

ತುಂಬ ಬಿಸಿ, ಖಾರ, ಹುಳಿ ಮೊದಲಾದ ಪದಾರ್ಥಗಳಿಂದ ತುಂಬಿರುತ್ತದೆ. ಇಂಥ ಆಹಾರ ವಿಕೃತ ಭಾವನೆಗಳನ್ನು ಮೂಡಿಸುತ್ತದೆ. ದುಃಖ, ರೋಗರುಜಿನಗಳು ಮತ್ತು ಒತ್ತಡಗಳಿಗೆ ಕಾರಣವಾಗುತ್ತದೆ.

*ತಾಮಸ ಆಹಾರ*

ತಂಗುಳಾದುದು, ಹಳಸಿದುದು, ಅರೆಬೇಯಿಸಿದುದು, ಕೆಟ್ಟ ವಾಸನೆಯಿಂದ ಕೂಡಿದುದು, ಕೊಳೆಯುತ್ತಿರುವುದು, ಶುದ್ಧವಾಗಿಲ್ಲದಿರುವುದು ಮತ್ತು ತಸುವಂಥವು ಮತ್ತು ಮಾಂಸ ಮೊದಲಾದವು. ಇವು ಮನುಷ್ಯನನ್ನು ದುಷ್ಕೃತ್ಯಗಳಿಗೆ ಪ್ರೇರೇಪಿಸುವುದಲ್ಲದೆ ದೂಡುತ್ತವೆ. ಬುದ್ಧಿಶಕ್ತಿಯನ್ನು ಮಸುಕು, ಮಂದಗೊಳಿಸುತ್ತವೆ. ರೋಗರುಜಿನಗಳು, ಆಲಸ್ಯ, ಸೋಮಾರಿತನ ಮತ್ತಿತರ ದುರ್ಗುಣಗಳಿಗೆ ದೂಡುತ್ತವೆ.

ಧರ್ಮಶಾಸ್ತ್ರ ಗ್ರಂಥಗಳಲ್ಲಿ ವಿವರಿಸಲಾಗಿರುವ ಪುನರ್ಜನ್ಮ ಸಿದ್ಧಾಂತದ ಪ್ರಕಾರ ಎಂಬತ್ತನಾಲ್ಕು ಲಕ್ಷ ಜೀವರೂಪಗಳನ್ನು ತಳೆದನಂತರ ಮಾತ್ರವೇ ಮಾನವ ಜನ್ಮ ಬರುತ್ತದೆ. ಇದರಿಂದ ಎಲ್ಲ ಜೀವಿಗಳೂ ನಮ್ಮ ಹಿಂದಿನ ಯಾವುವೋ ಜನ್ಮಗಳಲ್ಲಿ ನಮಗೆ ಸಂಬಂಧಪಟ್ಟವಾಗಿದ್ದವು ಎಂಬ ಭಾವನೆ ನಮಗೆ ಮೂಡುತ್ತದೆ. ಈ ರೀತಿಯಲ್ಲಿ ಜೀವಿಯ ಮಾಂಸವನ್ನು ಸೇವಿಸುವುದರ ಮೂಲಕ ನಾವು ನಮ್ಮ ಬಂಧುಗಳ ಪೈಕಿ ಯಾರದೋ ಒಬ್ಬರ ಮಾಂಸ ತಿಂದಂತೆಯೇ ಆಗುತ್ತದೆ.

ಅಥರ್ವವೇದವು ಮಾಂಸಭಕ್ಷಣೆ ಮತ್ತು ಭ್ರೂಣಹತ್ಯೆಯನ್ನು ಹೀಗೆ ವಿವರಿಸಿದೆ (೮.೬.೨೩) :

*ಯ ಆಮಂ ಮಾಂಸಮದಂತಿ ಪೌರುಷೇಯಂ ಚ ಯೇ ಕ್ರವಿಃ।*
*ಗರ್ಭಾನ್ ಖಾದಂತಿ ಕೇಶವಾಸ್ತಾನಿತೋ ನಾಶಯಾಮಸಿ ॥*

ಯಾರು ಹಸಿಯ ಅಥವಾ ಬೇಯಿಸಿದ ಮಾಂಸವನ್ನು ತಿನ್ನುವರೊ, ಯಾರು ಭ್ರೂಣಹತ್ಯೆಯನ್ನು ಮಾಡುವರೋ ಅವರನ್ನು ನಾವು ಇಲ್ಲಿಂದ ನಾಶಮಾಡುತ್ತೇವೆ.

ಮಹರ್ಷಿ ದಯಾನಂದ ಸರಸ್ವತಿಯವರು ಸತ್ಯಾರ್ಥಪ್ರಕಾಶ ದಲ್ಲಿ ''ಮಾಂಸ ತಿನ್ನುವ ವ್ಯಕ್ತಿಯನ್ನು ಅವನು ಹಿಂಸಾಪ್ರವೃತ್ತಿಯವನನ್ನಾಗುವಂತೆ ಮಾಡುತ್ತದೆ'' ಎಂದು ವಿವರಿಸಿರುವರು. ಮಾಂಸ ತಿನ್ನುವ ಮತ್ತು ಸುರಪಾನ ಮಾಡುವವರ ದೇಹಗಳು ಮತ್ತು ವೀರ್ಯ ಇವೆಲ್ಲ ಕಲುಷಿತಗೊಳ್ಳುವಂತೆ ಆಗುತ್ತದೆ.

★ ಇಸ್ಲಾಮ್

ಇಸ್ಲಾಮಿನ ಎಲ್ಲ ಸೂಫಿ ಸಂತರು ಉತ್ತಮ ಜೀವನ ನಡೆಸುವ ಬಗ್ಗೆ, ತ್ಯಾಗ ಮತ್ತು ದಯಾಪೂರ್ಣ ಜೀವನದ ಬಗ್ಗೆ, ಸರಳವಾದ ಆಹಾರ ಸೇವನೆ ಹಾಗೂ ಮಾಂಸವರ್ಜನೆಯ ಬಗ್ಗೆ ಆದ್ಯತೆ ನೀಡಿರುವರು; ಸ್ವತಃ ತಾವೇ ಮಾಂಸ ತಿನ್ನುವುದನ್ನು ಬಿಟ್ಟಿದ್ದರು. ಷೇಖ್ ಇಸ್ಮಾಯಿಲ್, ಖ್ವಾಜಾ ಮೋಯಿನುದ್ದೀನ್ ಚಿಸ್ಟಿ, ಹಜರತ್ ನಿಜಾಮುದ್ದೀನ್ ಔಲಿಯ, ಬು ಅಲಿ ಖಲಂದಾಸ್, ಷಾ ಇನಾಯತ್, ಮೀರ್‌ದಾದ, ಷಾ ಅಬ್ದುಲ್ ಕರೀಮ್ ಮೊದಲಾ ಸೂಫೀ ಸಂತರ ಜೀವನ ಸಂಯಮದ, ಸಾತ್ವಿಕ ಜೀವನವಾಗಿತ್ತು, ಸಕಲರ ಬಗ್ಗೆ ಪ್ರೀತಿವಾತ್ಸಲ್ಯಗಳ ಹಾಗೂ ಸಸ್ಯಾಹಾರದ ಬಗ್ಗೆ ಒಲವಿನ ಜೀವನವಾಗಿತ್ತು, ಅವರ ವಾಣಿ ''ತ ಬಯಾಬಿನ್ ದರ್ ಬುಷಿಸ್ತೇ ಆದೇನ ಜಾ, ಫ್ಯತೇ ಬನುಮಯೇ ಬ ಖಲ್ಕೇ ಖುದಾ.'' ಎಂದರೆ ನೀವು ಸದಾ ಕಾಲ ಸ್ವರ್ಗದಲ್ಲಿಯೇ ಇರಬಯಸುವಿರಾದರೆ, ದೈವದ ಸಕಲ ಸೃಷ್ಟಿಯ ಬಗ್ಗೆ ಕರುಣೆ ಮತ್ತು ಅನುಕಂಪಭಾವಗಳಿಂದ ವರ್ತಿಸಿ ನಡೆದುಕೊಳ್ಳಿ. ರೊಟ್ಟಿಯ ತುಣುಕುಗಳು ಅಲ್ಲದೆ ನಾವು ಏನನ್ನೇ ಸೇವಿಸಲು ಅದೆಲ್ಲ ನಮ್ಮ ಬಯಕೆಗಳನ್ನು ಪೂರೈಸಿಕೊಳ್ಳುವುದಕ್ಕಷ್ಟೇ ಆಗುತ್ತದೆ ಎಂಬುದು ಇರಾನಿನ ದಾರ್ಶನಿಕ ಅಲ್ ಗಜಲಿಯ ಅಭಿಪ್ರಾಯವಾಗಿದೆ.

ಯಾರೇ ಆಗಲಿ ತಾನು ಇನ್ನೊಂದು ಜೀವಿಯ ಮಾಂಸವನ್ನು ತಿಂದರೆ ಅದಕ್ಕೆ ಪ್ರತಿಯಾಗಿ ತನ್ನ ಮಾಂಸವನ್ನೇ ಕೊಡಬೇಕಾಗುತ್ತದೆ ಎಂದು ಪ್ರಸಿದ್ಧ ಸಂತ ಮೀರ್‌ದಾದ ಹೇಳುವರು. ಮತ್ತೊಂದು ಜೀವಿಯ ಮೂಳೆಗಳನ್ನು ಮುರಿಯುವವನ ಮೂಳೆಗಳು ಪುಡಿಪುಡಿಯಾಗುವುವು. ಮತ್ತೊಬ್ಬರ ಪ್ರತಿಯೊಂದು ರಕ್ತತೊಟ್ಟಿಗೂ ತನ್ನ ರಕ್ತವನ್ನೇ ನೀಡಬೇಕಾಗುತ್ತದೆ. ಜೀವನಜ್ಯೋತಿಯು ಲೋಹಗಳಲ್ಲಿ ನಿದ್ರಾಮಯವಾಗಿದೆ, ಸಸ್ಯಗಳಲ್ಲಿ ಕನಸು ಕಾಣುತಿದೆ ಮತ್ತು ಪ್ರಾಣಿಗಳಲ್ಲಿ ಜಾಗೃತವಾಗಿದೆ ಮತ್ತು ಮಾನವರಲ್ಲಿ ಸಂಪೂರ್ಣವಾಗಿ ಎಚ್ಚರವಾಗಿದೆ ಎಂದು ಸೂಚಿಸುವುದರ ಮೂಲಕ ಮಹಾನ್ ಸಂತ ಸುರ್ಮದನು ಮಾಂಸ ಸೇವನೆಯನ್ನು ಖಂಡಿಸಿದ. ರೋಜಾ ಆಚರಿಸುವವನು ರುಚಿಯ ಸಲುವಾಗಿ ತನ್ನ ನಾಲಗೆಯನ್ನು ಸಡಿಲಿಸಿದರೆ ಅದು ಕೂಡ ವ್ಯರ್ಥವಾಗುತ್ತದೆ ಎಂದು ಕಬೀರ್ ಮುಸಲ್ಮಾನರಿಗೆ ಸೂಚಿಸಿರುವರು. ಇದರಿಂದ ಅಲ್ಲಾಹ್‌ನಿಗೆ ತೃಪ್ತಿಯಾಗುವುದಿಲ್ಲ.

ಲಂಡನ್ ಮಸೀದಿಯ ಇಮಾಮ್ ಅಲ್ ಹಫೀಜ್ ಬಿ.ಎ. ಮಸ್ರಿಯವರು, 'ಇಸ್ಲಾಮಿಕ್ ಕನ್ಸರ್ನ್ ಫಾರ್ ಆನಿಮಲ್ಸ್,' ಎಂಬ ತಮ್ಮ ಕೃತಿಯಲ್ಲಿ ಧರ್ಮದ ಹೆಸರಿನಲ್ಲಿ ಪ್ರಾಣಿಗಳ ವಿರುದ್ಧ ಅತ್ಯಾಚಾರವೆಸಗುವುದರ ಬಗ್ಗೆ ತಮ್ಮ ದುಃಖ ವ್ಯಕ್ತಪಡಿಸಿದರು. ಪವಿತ್ರ ಖುರಾನ್ ಮಜೀದ್ ಮತ್ತು ಪ್ರಮಾದಿ ಮಹಮ್ಮದ್‌ರ ಉಪದೇಶಗಳನ್ನು ಉದ್ಧರಿಸುತ್ತ ಅವರು ಪ್ರಾಣಿಗಳನ್ನು ಹಿಂಸಿಸುವ ಎಲ್ಲ ಕೃತ್ಯಗಳು ಮತ್ತು ಪಕ್ಷಿಗಳನ್ನು ಪಂಜರಗಳಲ್ಲಿ ಬಂಧಿಸಿಡುವುದು ಕೂಡ ಪಾಪಕರ ಎಂದು ವಿವರಿಸಿರುವವರು. ಅವರ ಪ್ರಕಾರ ಮರಗಳನ್ನು ಕಡಿಯುವುದನ್ನು ಕೂಡ ಇಸ್ಲಾಂ ನಿಷೇಧಿಸುತ್ತದೆ.

''ಗುಬ್ಬಚ್ಚಿಯ ಬಗ್ಗೆಯೂ ಮರುಕತೋರಿಸಿ, ಯಾರು ಅದರ ಜೀವ ಉಳಿಸುವರೋ ಅವರ ಬಗ್ಗೆ ಅಲ್ಲಾಹ್‌ನು ಅಂತಿಮ ಮಹಾ ವಿಚಾರಣೆಯಂದು ಕರುಣಾಮಯಿಯಾಗಿರುವನು.'' ಇಮಾಮ್ ಮಸ್ರಿಯವರು ಸಸ್ಯಾಹಾರಿಯಾಗಿದ್ದರು ಮತ್ತು ಸಸ್ಯಾಹಾರ ಪದ್ಧತಿಯನ್ನು ಅಳವಡಿಕೊಳ್ಳುವಂತೆ ಪ್ರತಿಯೊಬ್ಬರಿಗೂ ಸಲಹೆ ನೀಡುತ್ತಿದ್ದರು.

*ಕ್ರೈಸ್ತ ಧರ್ಮ*

ಏಸುಕ್ರಿಸ್ತನು ಜಾನ್ ದಿ ಬ್ಯಾಪ್ಟಿಸ್ಟ್‌ನಿಂದ ಆಧ್ಯಾತ್ಮಿಕ ಜಾಗೃತಿಯನ್ನು ಪಡೆದುಕೊಂಡನು. ಜಾನ್ ದಿ ಬ್ಯಾಪ್ಟಿಸ್ಟ್‌ನು ಮಾಂಸಾಹಾರ ಸೇವನೆಯ ಕಡುವಿರೋಧಿಯಾಗಿದ್ದನು. ಏಸುಕ್ರಿಸ್ತನ ಉಪದೇಶಗಳ ಎರಡು ಮುಖ್ಯ ತತ್ತ್ವಗಳು : ನೀನು ಕೊಲ್ಲಕೂಡದು ಮತ್ತು ನಿನ್ನ ನೆರೆಯವರನ್ನು ಪ್ರೀತಿಸು. ಶಾಂತಿ ಸುವಾರ್ತೆಯಲ್ಲಿ ಏಸುಕ್ರಿಸ್ತನ ಅಭಿಪ್ರಾಯ : ''ಸತ್ಯವೇನೆಂದರೆ ಯಾರು ಮತ್ತೊಂದು ಜೀವಿಯನ್ನು ಕೊಲ್ಲುತ್ತಾರೋ ಅಂಥವರು ವಾಸ್ತವವಾಗಿ ತಮ್ಮನ್ನು ತಾವೇ ಕೊಂದುಕೊಂಡಂತೆ. ಯಾರು ಪ್ರಾಣಿಯನ್ನು ಕೊಂದನಂತರ ಅದರ ಮಾಂಸವನ್ನು ತಿನ್ನುವರೋ ಅಂಥವರು ವಾಸ್ತವವಾಗಿ ತಮ್ಮ ಮಾಂಸವನ್ನು ತಾವೇ ತಿಂದಂತೆ ಆಗುತ್ತದೆ. ಪ್ರಾಣಿಯ ಸಾವು ಯಾರು ಪ್ರಾಣಿಯನ್ನು ಕೊಲ್ಲುತ್ತಾರೋ ಅವರ ಸಾವೇ ಆಗುತ್ತದೆ. ಏಕೆಂದರೆ ಈ ಅಪರಾಧಕ್ಕೆ ಶಿಕ್ಷೆ ಅಥವಾ ಪ್ರತೀಕಾರ, ಸೇಡು ಸಾವಿಗಿಂತ ಕಡಿಮೆಯಾದುದು ಯಾವುದೂ ಅಲ್ಲ.'' ಮತ್ತೆ ''ನಿರುಪದ್ರವಿ ಪ್ರಾಣಿಯನ್ನು ಕೊಲ್ಲಬೇಡಿ, ಇಲ್ಲವೇ ಮುಗ್ಧ (ಅಮಾಯಕ) ಪ್ರಾಣಿಯ ಮಾಂಸ ತಿನ್ನಬೇಡಿ. ಇಲ್ಲವೇ ನೀವೇ ಸೈತಾನನ ಗುಲಾಮರಾಗಿಬಿಡುವಿರಿ.'' ಮತ್ತೂ ಅವನು ಹೇಳಿದ್ದು ಏನೆಂದರೆ, ''ಸಸ್ಯಾಹಾರವು ನಿಮಗೆ ಜೀವನ ಹಾಗೂ ಶಕ್ತಿಯನ್ನು ನೀಡುತ್ತದೆ. ಅದೇ ನೀವು ಸತ್ತ ಆಹಾರ (ಮಾಂಸ) ಸೇವನೆ ಮಾಡಿದರೆ ನಿಮ್ಮ ಆಹಾರವು ನಿಮ್ಮನ್ನು ಕೊಲ್ಲುತ್ತದೆ; ಜೀವಕ್ಕೆ ಜೀವ ಸಾವಿಗೆ ಸಾವು ಸದಾ ಕಟ್ಟಿಟ್ಟ ಬುತ್ತಿ.''

★ ಹನ್ಸಾ ಹೀರಾ ಮೋತಿ ಚುಗ್ನಾ





★ *ಸಿಖ್ ಧರ್ಮ*

ಗುರುವಿನ ಅನುಯಾಯಿಗಳಿಗೆ ಕುರ್ಬಾನಿಯ ''ಅನ್ನಾಪಾನೀ ಥೋಡಾ ಖಾಯ'' ಎಂದರೆ ನಿಮ್ಮ ಅಗತ್ಯಗಳಿಗೆ ಕಡಿಮೆ ತಿನ್ನಿರಿ, ಕುಡಿಯಿರಿ – ಎಂದು ಉಪದೇಶಿಸುತ್ತದೆ. ಗುರು ಅರ್ಜುನದೇವ್ ದೇವರ ನಿಜಭಕ್ತರನ್ನು ಹಂಸಗಳಿಗೆ ಹೋಲಿಸಿ, ಇತರರನ್ನು ಬಕಗಳಿಗೆ ಹೋಲಿಸಿರುವನು. ಹಂಸಗಳ ಆಹಾರ ಮುತ್ತುಗಳಾಗಿದ್ದರೆ ಬಕಗಳು ಮೀನುಕಪ್ಪೆಗಳನ್ನು ತಿಂದು ಬದುಕುತ್ತವೆ ಎಂದು ಸೂಚಿಸಿರುವನು.

*'ಹನ್ಸಾ ಹೀರಾ ಮೋತಿ ಚುಗ್ನಾ, ಬಾಗೂ ದಾದಾ ಭಾಲನ್ ಜಾವೇ'*
*''ಆದಿ ಗ್ರಂಥ, ಪು ೯೬೦'''*

ಗುರುದ್ವಾರದಲ್ಲಿ ನೀಡುವ ಪ್ರಸಾದ ಯಾವಾಗಲೂ ಸಸ್ಯಾಹಾರವೇ ಆಗಿರುತ್ತದೆ. ಗುರುನಾನಕ ದೇವರು ಸಸ್ಯಾಹಾರವನ್ನು ಮಾತ್ರ ಸೇವಿಸುತ್ತಿದ್ದರು.

ಕುರ್ಬಾನಿಯು ಹಿಂಸೆಯನ್ನು ಖಡಾಖಂಡಿತವಾಗಿ ವಿರೋಧಿಸುತ್ತದೆ ಮತ್ತು ಜೊತೆಯವರ ಬಗ್ಗೆ ಪ್ರೀತಿ ಪ್ರೇಮಾನುಕಂಪಗಳನ್ನು ತೋರುವ ಬಗ್ಗೆ ಈ ರೀತಿ ಉಪದೇಶಿಸುತ್ತದೆ.

*''ಹಿಂಸಾ ತೋ ಮಾನ್ ತೇ ನಹೀಂ ಚುಟ್ಟಿ ಜೀಯಾ ದಯಾ ನಹೀಂ ಪಾಲೇ''*
*ಆದಿಗ್ರಂಥ, ಪು ೧೨೫೫*

ಕರುಣೆ, ಅಹಿಂಸೆಗಳ ಬಗ್ಗೆ ಕಬೀರರ ಉಪದೇಶಗಳು ಮತ್ತು ಮಾಂಸಸೇವನೆಯ ಬಗ್ಗೆ ಅವರ ಖಂಡನೆಯನ್ನು ಆದಿಗ್ರಂಥದಲ್ಲಿ ವಿವಿಧ ಸಂದರ್ಭಗಳಲ್ಲಿ ಸ್ತುತಿಸಲಾಗಿದೆ. ಎಲ್ಲ ಗುರುಸಾಹೇಬರು ಹಿಂಸೆಯನ್ನು ಸ್ಪಷ್ಟವಾಗಿ ನಿಷೇಧಿಸಿರುವರು ಹಿಂಸೆಯನ್ನು ನಿಷೇಧಿಸಿರುವಾಗ ಮೀನು, ಮಾಂಸ ಮೊದಲಾದವುಗಳನ್ನು ತಿನ್ನುವ ಪ್ರಸಂಗವೇ ಉದ್ಭವಿಸುವುದಿಲ್ಲ. ಹಲವಾರು ವರ್ಷಗಳ ಆಳವಾದ ಸಂಶೋಧನೆ ನಡೆಸಿದ ತರುವಾಯ ಶಿರೋಮಣಿ ಗುರುದ್ವಾರ ಪ್ರಬಂಧಕ್ ಸಮಿತಿಯು ಗುರುಗಳ ಆದೇಶಗಳು ಮತ್ತು ಆಜ್ಞೆಗಳನ್ನು ಕೃತಿರೂಪದಲ್ಲಿ ಪ್ರಕಟಿಸಿದೆ. ಅವುಗಳ ಪೈಕಿ ಒಂದು ಹುಕುಂನಾಮಾ ಹೀಗಿದೆ;

*ಹುಕುಂ ನಾಮಾ ಬಾಬಾ ಬಂದಾ ಬಹಾದುರ್ ಜೀ*
*ಮೋಹರ್ ಫಾರ್ಸೀ*
*ದೇಗೋ ತೇಗೋ ಫತೇಹಿ ನಸ್ರತ್ ಬೆದ್ರಿಂಗ್*
*ಯಫ್ತ್ ಅಜ್ ನಾನಕ್ ಗುರು ಗೋಬಿಂದ್ ಸಿಂಗ್*
*ಓ। ಫತೇ ದಾರ್ಸಾನೂ।*
*(ಹುಕುಂನಾಮಾ ಸಂ. ೧೧೨, ಪು ೧೦೨)*

''ಸಮಸ್ತ ಖಾಲ್ಸಾಕ್ಕೆ ನಿಜ ದೈವದ ಆಜ್ಞೆಯೇನೆಂದರೆ ..... ಅವರು ಭಂಗ್, ತಂಬಾಕು, ಅಫೀಮು, ಮದ್ಯಗಳಿಂದ ದೂರವಿರಬೇಕು ಮತ್ತು ಮಾಂಸ, ಮೀನು, ಈರುಳ್ಳಿ ಮೊದಲಾದವನ್ನು ಸೇವಿಸಬಾರದು; ಇಲ್ಲವೇ ಕಳುವು ಮಾಡಬಾರದು ಮತ್ತು ವಿಷಯಾಭಿಲಾಷಿಗಳಾಗಬಾರದು.''

ಎಲ್ಲ ಸಿಖ್ ಗುರುದ್ವಾರಗಳ ಲಂಗರಿನಲ್ಲಿ ಆಹಾರವು ಕಡ್ಡಾಯವಾಗಿ ಸಸ್ಯಾಹಾರದ್ದಾಗಿಯೇ ಇರುತ್ತವೆ.

*ಜೈನಧರ್ಮ*

ಜೈನಧರ್ಮದ ಅತ್ಯಂತ ಮುಖ್ಯ ತತ್ತ್ವ ಅಹಿಂಸೆಯಾಗಿದೆ. ಜೈನಧರ್ಮ ಶಾಸ್ತ್ರಗ್ರಂಥಗಳು ಹಿಂಸೆಯ ೧೦೮ ಬಗೆಗಳನ್ನು ಪಟ್ಟಿಮಾಡಿವೆ. ಮಾನಸಿಕವಾಗಿ ಮತ್ತು ಕೃತ್ಯಗಳಲ್ಲಿ ಹಿಂಸೆ, ತಾನೇ ಹಿಂಸೆಯಲ್ಲಿ ತೊಡಗುವುದು ಅಥವಾ ಇತರರು ಹಿಂಸಿಸುವುದರಲ್ಲಿ ದುಷ್ಟಾನುಕೂಲನಾಗುವುದು – ಇವೆಲ್ಲವೂ ನಿಷೇಧಿತವಾಗಿವೆ. ಹಿಂಸೆಯ ಬಗ್ಗೆ ಯೋಚಿಸುವುದು ಕೂಡ ಪಾಪಕರ. ಕಾಯಾ, ವಾಚಾ, ಮನಸಾ ಹಿಂಸೆ ಪ್ರಕಟಗೊಳ್ಳುತ್ತದೆ. ಬೇರೆಯವರಿಗೆ ನೋವನ್ನುಂಟುಮಾಡುವಂಥ ಮಾತನಾಡುವುದನ್ನು ಕೂಡ ಪಾಪವೆಂದೂ ಪರಿಗಣಿಸಲಾಗಿದೆ. ಪ್ರಾಣಿಗಳನ್ನು ಕಟ್ಟಿಹಾಕುವುದು, ಅವುಗಳಿಗೆ ನೋವನ್ನುಂಟುಮಾಡುವುದು, ಅವುಗಳಿಗೆ ಅತಿಯಾದ ಹೊರೆ ಹೊರಿಸುವುದು, ಅವುಗಳಿಗೆ ನೋವನ್ನುಂಟು ಮಾಡುವುದು, ಅವುಗಳಿಗೆ ಅತಿಯಾದ ಹೊರೆ ಹೊರಿಸುವುದು ಅಥವಾ ಅವುಗಳನ್ನು ಪಂಜರಗಳಲ್ಲಿ ಇಡುವುದನ್ನು ಕೂಡ ಪಾಪಕರ ಎಂದು ಪರಿಗಣಿಸುವ ಧರ್ಮದಲ್ಲಿ ಮಾಂಸ ಸೇವನೆಯ ಪ್ರಶ್ನೆಯಂತೂ ಉದ್ಭವಿಸುವ ಸಾಧ್ಯತೆಯೇ ಇಲ್ಲ.

*ಬೌದ್ಧಧರ್ಮ*

ಬೌದ್ಧಧರ್ಮದ 'ಪಂಚಶೀಲ'ದ ಪ್ರಕಾರ ಮೊತ್ತ ಮೊದಲನೆಯ ಹಾಗೂ ಮುಖ್ಯ ತತ್ತ್ವವು ಯಾವುದೇ ಜೀವಿಯನ್ನು ಹಿಂಸಿಸದಿರುವುದೇ – ಎಂದರೆ ಅಹಿಂಸೆಯೇ ಆಗಿದೆ. ಐದನೆಯ ಹಾಗೂ ಕೊನೆಯದಾದ ತತ್ತ್ವವು ಮದ್ಯ ಮತ್ತು ಮತ್ತಿತರ ಮತ್ತು ಬರಿಸುವ ಪದಾರ್ಥಗಳ ಬಳಕೆಯನ್ನು ನಿಷೇಧಿಸುತ್ತದೆ. ಲಂಕಾವತಾರ ಸೂತ್ರದ ೮ನೇ ಕಾಂಡದ ಅನುಸಾರ ಜನ್ಮ-ಪುನರ್ಜನ್ಮಗಳ ಸುದೀರ್ಘ ಸರಣಿಯಲ್ಲಿ ಪ್ರತಿ ಜೀವಿಯು ಒಂದಲ್ಲ ಒಂದು ಸಲ ಪ್ರತಿಯೊಂದು ಇತರ ಜೀವಿಯೊಡನೆ ಸಂಬಂಧಪಡೆದಿರುತ್ತದೆ. ಅದು ಪ್ರತಿಯೊಬ್ಬರಿಗೂ ಎಲ್ಲ ಜೀವಿಗಳನ್ನು ತಮ್ಮ ಆಪ್ತರೆಂದೇ ಪರಿಗಣಿಸಬೇಕೆಂದು ಸೂಚಿಸುತ್ತದೆ. ಆಪತ್ಕಾಲದಲ್ಲಿ ಕೂಡ ಮಾಂಸ ಸೇವನೆಯನ್ನು ಸಮರ್ಥಿಸಲಾಗುವುದಿಲ್ಲ. ಮಾಂಸ ಅಥವಾ ರಕ್ತವನ್ನು ಒಳಗೊಂಡಿರದಂಥ ಅಥವಾ ಜೀವೋತ್ಪಾದಕ ಅಂಶಗಳನ್ನು ಒಳಗೊಂಡಿರದಂಥ ಆಹಾರ ಮಾತ್ರವೇ ಸೂಕ್ತವೆಂದೂ ಸೂಚಿಸಲಾಗಿದೆ.

ಹಾಗಾಗಿ ಪ್ರತಿಯೊಂದು ಧರ್ಮವೂ ಪ್ರತಿ ಜೀವಿಯಲ್ಲಿಯೂ ದೈವಾಂಶವಿರುವುದನ್ನು ಒಪ್ಪುತ್ತದೆ. ಅಹಿಂಸೆ, ದಯೆಯ ಬಗ್ಗೆ ಅವೆಲ್ಲ ಉಪದೇಶಿಸಿವೆ, ಮಾಂಸಸೇವನೆಯನ್ನು ಸಂಪೂರ್ಣವಾಗಿ ನಿಷೇಧಿಸಿವೆ.

★

★ ಹನ್ಸಾ ಹೀರಾ ಮೋತಿ ಚುಗ್ನಾ

## ಯುವ ಜನಾಂಗ ದಾರಿ ತಪ್ಪುತ್ತಿದೆ : ಸಿದ್ಧಗಂಗಾ ಶ್ರೀಗಳು



ಪರಮಪೂಜ್ಯ ಶ್ರೀ ಶ್ರೀಗಳವರು ಜ್ಯೋತಿ ಬೆಳಗಿಸುವುದರ ಮೂಲಕ ಶ್ರೀ ಎಡೆಯೂರು ಸಿದ್ದಲಿಂಗೇಶ್ವರ ಸ್ವಾಮಿ ದೇವಾಲಯವನ್ನು ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಅವರಗೊಳ್ಳದ ಶ್ರೀ ಶ್ರೀ ಓಂಕಾರ ಶಿವಾಚಾರ್ಯ ಸ್ವಾಮಿಗಳು, ದುರ್ದಂಡೇಶ್ವರ ಮಠದ ಶ್ರೀ ಶ್ರೀ ತ್ರಿನೇತ್ರ ಮಹಾಂತ ಸ್ವಾಮಿಗಳವರು, ಜನತಾವಾಣಿ ಸಂಪಾದಕ ಶ್ರೀ ಹೆಚ್.ಎನ್. ಷಡಾಕ್ಷರಪ್ಪ ವಾಣಿಜ್ಯೋದ್ಯಮಿ ಶ್ರೀ ಬಿ.ಜಿ. ಹಿರೇಮಠ, ಸಹಕಾರಿ ಧುರೀಣ ಶ್ರೀ ಎಸ್. ಕೊಟ್ಟಬಸಪ್ಪ, ಶ್ರೀ ಎಂ.ಡಿ. ಪಟೇಲ್ ಮೊದಲಾದವರು ಉಪಸ್ಥಿತರಿದ್ದರು.

'ಯುವಜನಾಂಗ ದಾರಿ ತಪ್ಪುತ್ತಿದೆ. ಧಾರ್ಮಿಕ ಮನೋಭಾವನೆ ಕಡಿಮೆಯಾಗುತ್ತಿದೆ, ಮಾನವೀಯ ಮೌಲ್ಯಗಳು ಕುಸಿಯುತ್ತಿವೆ. ಎಲ್ಲೆಲ್ಲೂ ಅಶಾಂತಿ, ಹಿಂಸೆ, ಭ್ರಷ್ಟಾಚಾರ ತಾಂಡವವಾಡುತ್ತಿದೆ' ಎಂದು ಶ್ರೀ ಸಿದ್ಧಗಂಗಾ ಕ್ಷೇತ್ರದ ಪರಮಪೂಜ್ಯ ಡಾ. ಶಿವಕುಮಾರ ಮಹಾಸ್ವಾಮಿಗಳವರು ಆತಂಕ ವ್ಯಕ್ತಪಡಿಸಿದರು. ಶ್ರೀಗಳು ಡಿಸೆಂಬರ್ ೩ರಂದು ದಾವಣಗೆರೆಯಲ್ಲಿ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆವರಣದಲ್ಲಿ ನೂತನವಾಗಿ ನಿರ್ಮಿಸಿರುವ ಶ್ರೀ ಎಡೆಯೂರು ಸಿದ್ದಲಿಂಗೇಶ್ವರ ಸ್ವಾಮಿ ದೇವಾಲಯ ಉದ್ಘಾಟನೆ ನೆರವೇರಿಸಿ ಆಶೀರ್ವಚನ ನೀಡುತ್ತಿದ್ದರು. ಗುರು ದೇವೋಭವ, ಮಾತೃ ದೇವೋಭವ, ಪಿತೃ ದೇವೋಭವ ಎಂಬುದನ್ನು ಸಾರ್ಥಕಗೊಳಿಸಬೇಕಾಗಿದೆ. ನವ ಸಮಾಜದ ನಿರ್ಮಾಣಕ್ಕಾಗಿ ಇಂದಿನ ಯುವಕರು ಪಣತೊಡಬೇಕಾಗಿದೆ ಎಂದು ಕರೆ ನೀಡಿದರು.

ದಾವಣಗೆರೆಗೆ ಬರಿಗೈಲಿ ಬಂದು ತನ್ನ ಸಂಕಲ್ಪಶಕ್ತಿಯಿಂದ ಬಹುದೊಡ್ಡ ಸಾಧನೆ ಮಾಡಿದ ಶ್ರೀ ಎಂ.ಎಸ್. ಶಿವಣ್ಣನವರ ವ್ಯಕ್ತಿತ್ವವನ್ನು ಸಿದ್ಧಗಂಗಾ ಶ್ರೀಗಳು ಶ್ಲಾಘಿಸಿದರು. ದುರ್ದಂಡೇಶ್ವರ ಮಠದ ಶ್ರೀ ತ್ರಿನೇತ್ರ ಮಹಾಂತ ಶಿವಯೋಗಿ ಸ್ವಾಮಿಗಳವರು ಈ ಸಂದರ್ಭದಲ್ಲಿ ಆಶೀರ್ವಚನ ನೀಡಿದರು. ಜನತಾವಾಣಿ ಸಂಪಾದಕರಾದ ಶ್ರೀ ಹೆಚ್.ಎನ್. ಷಡಾಕ್ಷರಪ್ಪ ರಾಣೇಬೆನ್ನೂರಿನ ವಾಣಿಜ್ಯೋದ್ಯಮಿ ಶ್ರೀ ಬಿ.ಜಿ. ಹಿರೇಮಠ ಅವರು ಮಾತನಾಡಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸಹಕಾರಿ ಧುರೀಣರಾದ ಶ್ರೀ ಎಸ್. ಕೊಟ್ರಬಸಪ್ಪ ಅವರು ಗುರುಬಲ ಮತ್ತು ದೈವಬಲದಿಂದ ಮನುಷ್ಯ ಯಾವುದೇ ಕೆಲಸವನ್ನಾದರೂ ಮಾಡಲು ಸಾಧ್ಯ ಎಂದು ಪ್ರತಿಪಾದಿಸಿದರು. ಶ್ರೀ ಎಂ.ಎಸ್. ಶಿವಣ್ಣ ಅವರು ಸ್ವಾಗತಿಸಿ ಪ್ರಾಸ್ತಾವಿಕ ನುಡಿಗಳನ್ನಾಡಿದರು. ಶ್ರೀಮತಿ ಡಿಸೋಜಾ ಅವರು ಕಾರ್ಯಕ್ರಮವನ್ನು ನಿರೂಪಿಸಿ ವಂದಿಸಿದರು. ದೇವಸ್ಥಾನ ಮತ್ತು ಸಂಸ್ಥೆಗೆ ನೆರವಾದ ಅನೇಕರನ್ನು ಸ್ಮರಿಸಿ ಸನ್ಮಾನಿಸಲಾಯಿತು. ವೇದಿಕೆ ಮೇಲೆ ಗಣೇಶ ಸಾಮಿಲ್ ಮಾಲೀಕರಾದ ಶ್ರೀ ಎಂ.ಡಿ. ಪಟೇಲ್ ಮುಂತಾದವರು ಉಪಸ್ಥಿತರಿದ್ದರು.

(ಕೃಪೆ : ಜನತಾವಾಣಿ) ★





## ಸಿದ್ಧಗಂಗಾ ಪಬ್ಲಿಕ್ ಶಾಲೆಯಲ್ಲಿ ಕ್ರೀಡಾ ದಿನಾಚರಣೆ



ವಿದ್ಯಾರ್ಥಿಗಳಿಂದ ಕವಾಯತ್



ವೇದಿಕೆಯಲ್ಲಿ : ಶ್ರೀ ರಂಗಹನುಮಯ್ಯ, ಶ್ರೀ ಬಿ.ಎಸ್. ಚನ್ನಪ್ಪ
ಶ್ರೀ ಎಲ್. ರೇವಣಸಿದ್ದಯ್ಯ, ಶ್ರೀ ಬಿ.ಎಸ್. ಪರಮಶಿವಯ್ಯ,
ಶ್ರೀ ಎಂ.ವಿ. ರಾಮಕೃಷ್ಣಯ್ಯ ಮತ್ತು ಶ್ರೀಮತಿ ಮಧುರಾ ಅಶೋಕ್‌ಕುಮಾರ್

ಸಿದ್ಧಗಂಗಾ ಪಬ್ಲಿಕ್ ಶಾಲೆಯು ವಾರ್ಷಿಕ ಕ್ರೀಡಾದಿನವಾದ "ಸ್ಪೋರ್ಟ್ಸ್ ಸ್ಪೆಕ್ಟ್ರಾ - ೨೦೦೫" ಅನ್ನು ದಿನಾಂಕ ೨೪-೧೨-೨೦೦೫ ರಂದು ಶಾಲೆಯ ಆಟದ ಮೈದಾನದಲ್ಲಿ ಆಯೋಜಿಸಲಾಗಿತ್ತು. ಈ ಸಂದರ್ಭದಲ್ಲಿ ಸಹಕಾರಿ ಧುರೀಣ ಹಾಗೂ ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ಸಂಸ್ಥೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಬಿ.ಎಸ್. ಪರಮಶಿವಯ್ಯ ಅವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ರೆಡ್ ಕ್ರಾಸ್ ಸೊಸೈಟಿಯ ನಿರ್ದೇಶಕರಾದ ಶ್ರೀಮತಿ ಮಧುರಾ ಅಶೋಕ್ ಕುಮಾರ್ ಹಾಗೂ ಶ್ರೀ ಎಂ.ವಿ. ರಾಮಕೃಷ್ಣಯ್ಯ ಗೌರವ ಅತಿಥಿಗಳಾಗಿ ಆಗಮಿಸಿದ್ದರು.

ಮಕ್ಕಳಿಂದ ಪ್ರದರ್ಶಿಸಲ್ಪಟ್ಟ ಏರೋಬಿಕ್ಸ್, ವೈವಿಧ್ಯಮಯ ಡ್ರಿಲ್‌ಗಳು, ಕ್ರೀಡೆಗಳು ಹಾಗೂ ಕವಾಯತುಗಳು ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿ ಮಾಡಿದವು.

ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಚಂಪಕಮಾಲಿನಿಯವರು ಸ್ವಾಗತಕೋರಿ ಕ್ರೀಡಾ ವರದಿಯನ್ನು ವಾಚಿಸಿದರು. ಸನ್ಮಾನ್ಯ ಶ್ರೀ ಬಿ.ಎಸ್. ಪರಮಶಿವಯ್ಯನವರು ವಿದ್ಯಾರ್ಥಿಗಳ ಪ್ರತಿಭೆಯನ್ನು ಮತ್ತು ಶಿಸ್ತುಬದ್ಧ ಪ್ರದರ್ಶನವನ್ನು ಮುಕ್ತ ಕಂಠದಿಂದ ಶ್ಲಾಘಿಸಿದರು.

ಈ ಸಂದರ್ಭದಲ್ಲಿ ಉಪಸ್ಥಿತರಿದ್ದ ಶಾಲೆಯ ಅಧ್ಯಕ್ಷರಾದ ಸನ್ಮಾನ್ಯ ಶ್ರೀ ಎಲ್. ರೇವಣ್ಣ ಸಿದ್ದಯ್ಯನವರು, ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಮತ್ತು ಅಂತರ್‌ರಾಷ್ಟ್ರೀಯ ಕ್ರೀಡಾ ಪಟುಗಳಾಗುವಂತೆ ಕಿವಿಮಾತು ಹೇಳಿದರು. ಪಾಠ ಪ್ರವಚನಗಳ ಜೊತೆ ಜೊತೆಗೆ ಕ್ರೀಡೆಗಳು ಕೂಡ ಶಿಕ್ಷಣದ ಅವಿಭಾಜ್ಯ ಅಂಗವಾಗಬೇಕೆಂದು ತಿಳಿಸಿದರು.

ಒಟ್ಟಿನಲ್ಲಿ ಈ ಒಂದು ಸಮಾರಂಭ ಅರ್ಥಪೂರ್ಣವಾಗಿ ಮತ್ತು ವೈಶಿಷ್ಟ್ಯಪೂರ್ಣತವಾಗಿ ನಡೆಯಿತು.

ವರದಿ : ಶ್ರೀಮತಿ ಸುಧಾಮಣಿ

**ಶ್ರೀವಾಣಿ**

ತರುಣರು ಶಿಸ್ತು, ಸಂಯಮ, ಶ್ರದ್ಧೆ, ಭಕ್ತಿ ಬೆಳೆಸಿ ಕೊಂಡಾಗಲೇ ಆದರ್ಶ ರಾಜ್ಯವನ್ನು ಕಟ್ಟಲು ಸಾಧ್ಯ.

## ಸಂಸ್ಕೃತೋತ್ಸವ

ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನ್ನಿಧ್ಯದಲ್ಲಿ ಕರ್ನಾಟಕ ಸರ್ಕಾರದ ಅಭಿವೃದ್ಧಿ ಆಯುಕ್ತರಾದ ಶ್ರೀ ಚಿರಂಜೀವಿ ಸಿಂಗ್ ಅವರು ಜ್ಯೋತಿ ಬೆಳಗಿಸುವುದರ ಮೂಲಕ ಸಮಾರೋಪ ಸಮಾರಂಭವನ್ನು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಭಾರತ ಸರ್ಕಾರದ ಇಸ್ರೋದ ಕಾರ್ಯದರ್ಶಿಗಳಾದ ಡಾ. ಎಸ್.ಎಸ್. ಮೀನಾಕ್ಷಿ ಸುಂದರಂ ಅವರು ಉಪಸ್ಥಿತರಿದ್ದರು.

ಡಿಸೆಂಬರ್ ೯, ೨೦೦೪, ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿರುವ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಮಹಾವಿದ್ಯಾಲಯದ ಆಶ್ರಯದಲ್ಲಿ ೮೮ನೇ ಸಂಸ್ಕೃತೋತ್ಸವವು ವೈಭವದಿಂದ ಜರುಗಿತು. ಶ್ರೀ ಮಠದ ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಸಂಸ್ಕೃತ ಧ್ವಜಾರೋಹಣ ಮಾಡುವುದರೊಂದಿಗೆ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಶ್ರೀಮಠದ ಆಡಳಿತಾಧಿಕಾರಿಗಳಾದ ಶ್ರೀ ಪಿ.ಎಸ್. ಪುಟ್ಟಶಂಕರಯ್ಯನವರು ಸಂಸ್ಕೃತಿ-ಸಂಸ್ಕೃತ ವಸ್ತುಪ್ರದರ್ಶನವನ್ನು ಉದ್ಘಾಟಿಸಿದರು. ನಂತರ ಮಹಾವಿದ್ಯಾಲಯ ವಿದ್ಯಾರ್ಥಿಗಳಿಂದ ಪಥಸಂಚಲನ, ಕಾಲೇಜಿನ ಅಧ್ಯಾಪಕರುಗಳಿಂದ ಅಲಂಕಾರ, ವ್ಯಾಕರಣ, ನ್ಯಾಯವೇದಾಂತ ಶಾಸ್ತ್ರಗಳಲ್ಲಿ ಶಾಸ್ತ್ರಾರ್ಥ ಚಿಂತನಗೋಷ್ಠಿ ನಡೆದವು. ತುಮಕೂರಿನ ಸರ್ಕಾರಿ ಕಲಾ ಕಾಲೇಜಿನ ಸಂಸ್ಕೃತ ವಿಭಾಗದ ಮುಖ್ಯಸ್ಥರಾದ ಶ್ರೀ ಸುಬ್ರಹ್ಮಣ್ಯ ಅವರು ಗೋಷ್ಠಿಯನ್ನು ಉದ್ಘಾಟಿಸಿದರು.

ಅಂದು ಸಂಜೆ ೬ ಗಂಟೆಗೆ ಸಂಸ್ಕೃತೋತ್ಸವ ಸಮಾರೋಪ ಸಮಾರಂಭವು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು. ಸಮಾರಂಭದ ಅಧ್ಯಕ್ಷತೆಯನ್ನು ಭಾರತ ಸರ್ಕಾರದ ಇಸ್ರೋದ ಕಾರ್ಯದರ್ಶಿಗಳಾದ ಡಾ. ಎಸ್.ಎಸ್. ಮೀನಾಕ್ಷಿಸುಂದರಂ ಅವರು ವಹಿಸಿದ್ದರು. ಶ್ರೀಯುತರು ಕಳೆದ ೨೯ ವರ್ಷಗಳ ಹಿಂದೆ ತುಮಕೂರು ಜಿಲ್ಲಾಧಿಕಾರಿಯಾಗಿದ್ದಾಗ ಪರಮಪೂಜ್ಯರೊಡನೆ ಅನೇಕ ಸಭೆ ಸಮಾರಂಭಗಳಲ್ಲಿ ಪಾಲ್ಗೊಂಡ ಸವಿನೆನಪನ್ನು ಸ್ಮರಿಸಿಕೊಂಡು ಪರಮಪೂಜ್ಯರು ಸಮಾಜದ ಸರ್ವಾಂಗೀಣ ಅಭಿವೃದ್ಧಿಗೆ ಸಲ್ಲಿಸುತ್ತಿರುವ ಅನುಪಮ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಕರ್ನಾಟಕ ಸರ್ಕಾರದ ಅಭಿವೃದ್ಧಿ ಆಯುಕ್ತರಾದ ಶ್ರೀ ಚಿರಂಜೀವಿ ಸಿಂಗ್ ಅವರು ಸಮಾರೋಪದ ಸಮಾರಂಭದ ಉದ್ಘಾಟನೆಯನ್ನು ನೆರವೇರಿಸಿದರು. ಶ್ರೀಯುತರು ತಮ್ಮ ಉದ್ಘಾಟನಾ ಭಾಷಣದಲ್ಲಿ ಸಂಸ್ಕೃತಭಾಷೆ ನಮ್ಮ ಭರತಖಂಡವನ್ನು ಆಸೇತು ಹಿಮಾಚಲ ಪರ್ಯಂತ ಒಗ್ಗೂಡಿಸುವ ಭಾಷೆಯಾಗಿದೆ. ಒಂದು ಕಾಲದಲ್ಲಿ ಸಂಸ್ಕೃತ ಭಾಷೆ ನಮ್ಮ ರಾಷ್ಟ್ರದ ಆಡುಭಾಷೆಯಾಗಿತ್ತು, ಪಾಣಿನಿ ನಮ್ಮ ಪಂಜಾಬಿನವರು. ಅವರ ವ್ಯಾಕರಣದಲ್ಲಿ ನಮ್ಮ ರಾಜ್ಯದ ಅನೇಕ ಜೀವನದ ಉದಾಹರಣೆಗಳ ಸಹಿತ ವಿವರಿಸಿದರು.

ನಾನು ಮುಖ್ಯವಾಗಿ ಬಂದದ್ದೇ ಪರಮಪೂಜ್ಯರ ದರ್ಶನಕ್ಕಾಗಿ, ಪರಮಪೂಜ್ಯರು ಸಂಸ್ಕೃತ-ಸಂಸ್ಕೃತಿಯನ್ನು ಕಾಪಾಡುವುದರಲ್ಲಿ ಬಹು ದೊಡ್ಡ ಪ್ರಯತ್ನ ಮಾಡುತ್ತಿದ್ದಾರೆ ಎಂದು ತಿಳಿದರು. ಸಂಸ್ಕೃತೋತ್ಸವವನ್ನು ಕುರಿತು ಅಪರ ಸತ್ರ ನ್ಯಾಯಾಧೀಶರಾದ ಶ್ರೀ ಜೆ.ಎನ್. ಹಾವನೂರು ಅವರು ಸಂಸ್ಕೃತವನ್ನು ಕಲಿಯುವುದರಿಂದ ಪ್ರತಿಯೊಬ್ಬರಿಗೂ ತಮ್ಮ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡು ಬದುಕನ್ನು ಸುಂದರ ಸುಗಮಗೊಳಿಸಿ ಕೊಳ್ಳಬಹುದೆಂಬುದಾಗಿ ನುಡಿದರು. ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಾ ಇಡೀ ಜಗತ್ತಿಗೆ ಸಂಸ್ಕೃತ ಭಾಷೆಯು ಕೊಟ್ಟ ಮಹಾನ್ ಕೊಡುಗೆಯನ್ನು ಸ್ಮರಿಸುತ್ತಾ, ಮಕ್ಕಳು ಸಂಸ್ಕೃತವನ್ನು ಆಸಕ್ತಿಯಿಂದ ಕಲಿಯಬೇಕೆಂದು ಆದೇಶವಿತ್ತರು, ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಪಿ.ಎನ್. ಚಂದ್ರಶೇಖರಯ್ಯನವರು ಸ್ವಾಗತಿಸಿದರು. ಶ್ರೀ ಜೆ.ಸಿ. ರಾಜಶೇಖರಯ್ಯನವರು ವಂದಿಸಿದರು. ಶ್ರೀ ಡಿ.ಎಸ್. ಚಂದ್ರಶೇಖರಯ್ಯನವರು ಕಾರ್ಯಕ್ರಮವನ್ನು ನಿರೂಪಿಸಿದರು.

★





### *ಕನ್ನಡ ರಾಜ್ಯೋತ್ಸವ*

ಶ್ರೀ ಕ್ಷೇತ್ರದ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ಕನ್ನಡ ರಾಜ್ಯೋತ್ಸವ ಮತ್ತು ಮಕ್ಕಳ ದಿನಾಚರಣೆಯನ್ನು ಆಚರಿಸಲಾಯಿತು.

ದಿವ್ಯ ಸಾನ್ನಿಧ್ಯವಹಿಸಿ ಆಶೀರ್ವಚನ ನೀಡಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿಯವರು "ಕನ್ನಡ ಭಾಷೆ ಮತ್ತು ಸಂಸ್ಕೃತಿ ಜೀವಂತವಾದದ್ದು, ಅದಕ್ಕೆ ಸುದೀರ್ಘ ಇತಿಹಾಸವಿದೆ. ಒಳ್ಳೆಯ ಕವಿ ಪರಂಪರೆ ಇದೆ, ಆದರೆ ಆಂಗ್ಲರ ಆಡಳಿತದ ಕಾಲದಲ್ಲಿ ಅನೇಕ ಆಡಳಿತದಲ್ಲಿ ಒಳಪಟ್ಟು ಕಷ್ಟ ನಷ್ಟಗಳಿಗೆ ಗುರಿಯಾಯಿತು, ಮತ್ತು ಅದನ್ನು ಪುನರ್ ಸ್ಥಾಪಿಸಲು ಅನೇಕ ಮಹನೀಯರು ಅನೇಕ ವರ್ಷಗಳ ಕಾಲ ಹೋರಾಡಬೇಕಾಯಿತು, ಅವರಲ್ಲಿ ಸರ್. ಸಿದ್ದಪ್ಪ ಕಂಬಳಿ, ಆಲೂರು ವೆಂಕಟರಾವ್, ನಿಜಲಿಂಗಪ್ಪ ಮುಂತಾದವರು ಅವಿಸ್ಮರಣೀಯರು, ನಿಜಲಿಂಗಪ್ಪನವರ ರಾಜಕೀಯ ಇಚ್ಛಾಶಕ್ತಿಯಿಂದ ಈ ನಾಡು ಮತ್ತೆ ಒಂದಾಯಿತು, ಆದರೂ ಅನೇಕ ಕ್ಷೇತ್ರಗಳಲ್ಲಿ ನಾವು ಹಿಂದೆ ಇದ್ದೇವೆ, ಅದಕ್ಕೆ ನಮ್ಮ ಇಚ್ಛಾಶಕ್ತಿಯ ಕೊರತೆಯ ಕಾರಣ, ಶ್ರಮಪಡುವುದು ನಮ್ಮಲ್ಲಿ ಕಡಿಮೆ, ಶಿಸ್ತು, ಕಠಿಣ ಪರಿಶ್ರಮ ಇಲ್ಲದಿದ್ದರೆ ಏನನ್ನೂ ಸಾಧಿಸಲಾಗುವುದಿಲ್ಲ, ಜಪಾನ್, ಜರ್ಮನಿಯಂತ ರಾಷ್ಟ್ರಗಳು, ಅವರ ಭಾಷಾಭಿಮಾನ ದೇಶಾಭಿಮಾನ ದೊಡ್ಡದು ಅದನ್ನು ನಾವು ಮೈಗೂಡಿಸಿಕೊಳ್ಳಬೇಕು ಎಂದು ಕರೆನೀಡಿದರು.

ತುಮಕೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಅಧ್ಯಾಪಕರಾದ ಶ್ರೀ ವೆಂಕಟರೆಡ್ಡಿ ರಾಮರೆಡ್ಡಿಯವರು ಕನ್ನಡನಾಡು- ನುಡಿಯನ್ನು ಕುರಿತು ಮಾತನಾಡಿದರು.

ಸಂಸದರಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯನವರು ಅಧ್ಯಕ್ಷತೆ ವಹಿಸಿದ್ದರು.

### *ವಜ್ರ ಮಹೋತ್ಸವ ಕ್ರೀಡಾಕೂಟ*

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಜೀಯವರ ವಜ್ರಮಹೋತ್ಸವ ಸವಿನೆನಪಿನ ಕ್ರೀಡಾಕೂಟ ದಿನಾಂಕ : ೪-೧೨-೨೦೦೪ ಮತ್ತು ೫-೧೨-೨೦೦೪ರಂದು ನೆರವೇರಿತು.

ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ "ವಿದ್ಯಾರ್ಥಿಗಳು ಕ್ರೀಡೆಯ ಬಗ್ಗೆ ಹೆಚ್ಚು ಆಸಕ್ತಿ ಬೆಳೆಸಿಕೊಳ್ಳಬೇಕು, ಇದು ವಿದ್ಯಾಭ್ಯಾಸದ ಒಂದು ಅವಿಭಾಜ್ಯ ಅಂಗ, ಸದೃಢವಾದ ಶರೀರದಲ್ಲಿ ಸದೃಢವಾದ ಮನಸ್ಸಿರುತ್ತದೆ" ಎಂದು ಆಶೀರ್ವಚನ ನೀಡಿದರು.

ಅಧ್ಯಕ್ಷತೆ ವಹಿಸಿದ್ದ ತುಮಕುರು ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಶ್ರೀ ಎನ್.ಎಲ್. ಗಂಗಾಧರಗೌಡ ಅವರು 'ಕ್ರೀಡಾಪಟುಗಳಾಗಲಿ, ಉಪಾಧ್ಯಾಯರಾಗಲಿ ಶಿಸ್ತು ಮತ್ತು ಶ್ರಮ ಈ ಗುಣಗಳನ್ನು ರೂಢಿಸಿಕೊಳ್ಳಬೇಕು. ಕನಸನ್ನು ನನಸು ಮಾಡಿಕೊಳ್ಳಲು ಕಠಿಣ ಪರಿಶ್ರಮ ಅವಶ್ಯಕ' ಎಂದು ಕರೆ ನೀಡಿದರು.

ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಪಿ.ಬಿ. ಬಸವರಾಜು ಧ್ವಜಾರೋಹಣ ಮಾಡಿದರು. ಶ್ರೀ ವೆಂಕಟೇಗೌಡ ಅವರು ಕ್ರೀಡಾ ಜ್ಯೋತಿ ಹಾಗೂ ವಂದನಾ ಸ್ವೀಕಾರವನ್ನು ನೆರವೇರಿಸಿಕೊಟ್ಟರು.

ದಿನಾಂಕ ೫-೧೨-೦೪ರಂದು ಸಂಜೆ ಪ್ರಾರ್ಥನಾ ಸಭೆಯಲ್ಲಿ ಕಿರಿಯ ಶ್ರೀಗಳು ಬಹುಮಾನ ವಿತರಣೆಮಾಡಿದರು. ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಆಶೀರ್ವಚನ ನೀಡಿ ಯಾವಾಗಲೂ ಕ್ರೀಡೆಯಲ್ಲೆ ಕಾಲ ಕಳೆಯಬಾರದು. ಅಧ್ಯಯನದ ಸಂದರ್ಭದಲ್ಲಿ ಆಟ ಆಡುವುದು ನಿಷಿದ್ಧ. ಆಯಾಯ ಸಮಯದಲ್ಲಿ ಚಾಚು ತಪ್ಪದೆ ಕರ್ತವ್ಯ ಮಾಡಬೇಕು. ಕ್ರೀಡೆ ಪೂರ್ಣವಾದ ವ್ಯಕ್ತಿತ್ವಕ್ಕೆ ಸಹಕಾರಿ ಎಂದು ಆಶೀರ್ವದಿಸಿದರು.

ಈ ಕ್ರೀಡಾಕೂಟದಲ್ಲಿ ೫೩ ಪ್ರೌಢಶಾಲೆಗಳು, ೭ ಮಾಧ್ಯಮಿಕ ಶಾಲೆಗಳಿಂದ ೧೫೦೦ ಕ್ರೀಡಾಪಟುಗಳು ಭಾಗವಹಿಸಿದ್ದರು, ೭೫ ದೈಹಿಕ ಶಿಕ್ಷಕರು ಕ್ರೀಡಾ ಮೇಲ್ವಿಚಾರಕರಾಗಿ ಕಾರ್ಯನಿರ್ವಹಿಸಿ ಈ ಕ್ರೀಡಾಕೂಟವನ್ನು ಯಶಸ್ವಿಯಾಗಲು ಸಹಕರಿಸಿದರು.

### ಶ್ರೀಮಠಕ್ಕೆ ನೂತನ ಸಚಿವರ ಭೇಟಿ

ನೂತನ ಸಚಿವರಾಗಿ ಪ್ರಮಾಣ ವಚನ ಸ್ವೀಕರಿಸಿದ ಸಚಿವರಾದ ಸನ್ಮಾನ್ಯ ಶ್ರೀ ಎಚ್.ಕೆ. ಪಾಟೀಲ್, ಶ್ರೀ ಸಿ. ಚೆನ್ನಿಗಪ್ಪ, ಶ್ರೀ ಹೆಚ್.ಎಸ್. ಮಹದೇವ ಪ್ರಸಾದ್, ಶ್ರೀ ಅಮರೇಗೌಡ ಬಯ್ಯಾಪುರ, ಶ್ರೀ ಬಿ. ಸತ್ಯನಾರಾಯಣ ಅವರು ಶ್ರೀ ಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಜೀ ಯವರ ದರ್ಶನಾಶೀರ್ವಾದ ಪಡೆದುಕೊಂಡರು.

### *ಹಿರಿಯ ಸಂಶೋಧಕ ಡಾ. ಎಂ. ಚಿದಾನಂದಮೂರ್ತಿ ಭೇಟಿ*

ಡಾ. ಚಿದಾನಂದಮೂರ್ತಿಯವರು ಹಂಪಿ ವಿಶ್ವವಿದ್ಯಾನಿಲಯ ನೀಡಿದ "ನಾಡೋಜ" ಪ್ರಶಸ್ತಿ ಸ್ವೀಕರಿಸಿ ಬೆಂಗಳೂರಿಗೆ ಪ್ರಯಾಣ ಬೆಳಸುವಾಗ ಮಾರ್ಗಮಧ್ಯೆ ಶ್ರೀ ಕ್ಷೇತ್ರಕ್ಕೆ ಭೇಟಿ ನೀಡಿ ಗುರುದರ್ಶನ ಪಡೆದು ಪ್ರಾರ್ಥನಾ ಸಭೆಯಲ್ಲಿ ಮಕ್ಕಳನ್ನು ಕುರಿತು ಕನ್ನಡ ನಾಡು-ನುಡಿಯ ಬಗ್ಗೆ ವಿವರಿಸಿದರು. ನಂತರ ಒಂದು ವಾರಗಳ ಕಾಲ ಶ್ರೀ ಮಠದಲ್ಲಿ ವಾಸ್ತವ್ಯ ಹೂಡಿ ಒಂದು ಮುಖ್ಯ ಸಂಶೋಧನೆಯಲ್ಲಿ ತೊಡಗಿದ್ದರು.

### *ಕುವೆಂಪು ಶತಮಾನೋತ್ಸವ*

ಕುವೆಂಪು ಜನ್ಮ ಶತಮಾನೋತ್ಸವ ದಿನಾಂಕ ೨೦-೧೨-೨೦೦೪ ರಂದು ಸಂಜೆ ಪ್ರಾರ್ಥನೆ ಸಭೆಯಲ್ಲಿ ತುಮಕೂರು ಜಿಲ್ಲಾ ಮತ್ತು ತಾಲ್ಲೂಕು ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ "ಕುವೆಂಪು ಜನ್ಮ ಶತಮಾನೋತ್ಸವ ಸಾಪ್ತಾಹಿಕ ಕಾರ್ಯಕ್ರಮ"ದ ಉದ್ಘಾಟನಾ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀಗಳವರು ಜ್ಯೋತಿಬೆಳಗಿಸುವ ಮೂಲಕ ಕಾರ್ಯಕ್ರಮಕ್ಕೆ ಶುಭ ಕೋರಿದರು. ಪ್ರೊ. ಹ.ಬ. ಮಹದೇವಪ್ಪ ಅವರು ಕುವೆಂಪು ಅವರ ಮೇರು ವ್ಯಕ್ತಿತ್ವ ಪರಿಚಯಿಸಿದರು. ಅಧ್ಯಕ್ಷತೆ ವಹಿಸಿದ್ದ

ಪದವಿಪೂರ್ವ ಶಿಕ್ಷಣ ಇಲಾಖೆ ಉಪನಿರ್ದೇಶಕರಾದ ಶ್ರೀ ಕೆ. ದೊರೈರಾಜ್‌ರವರು ಕುವೆಂಪುರವರ ವಿಶ್ವಮಾನವ ಸಂದೇಶ ವಿವರಿಸಿದರು. ಶ್ರೀ ಚಂದ್ರಮೌಳಿಯವರು ಭಾಗವಹಿಸಿದ್ದರು.

### *ಅಂಧ ಮಕ್ಕಳಿಗೆ ಉಲ್ಲನ್ ರಗ್ಗುಗಳ ವಿತರಣೆ*

ದಿನಾಂಕ ೨೮-೧೨-೨೦೦೪ರಂದು ಪ್ರಾರ್ಥನಾ ಸಭೆಯಲ್ಲಿ ತುಮಕೂರಿನ ರೋಟರಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ವೈ.ಎಂ. ರೆಡ್ಡಿ, ಕಾರ್ಯದರ್ಶಿಗಳಾದ ಶ್ರೀ ನಾಗರಾಜು ಹಾಗೂ ಪದಾಧಿಕಾರಿಗಳು ಆಗಮಿಸಿ ಪೂಜ್ಯರ ಅಮೃತ ಹಸ್ತದಿಂದ ಶ್ರೀ ಸಿದ್ಧಗಂಗಾ ಅಂಧಮಕ್ಕಳ ಶಾಲೆಯ ಎಲ್ಲಾ ವಿದ್ಯಾರ್ಥಿಗಳಿಗೆ ಉಲ್ಲನ್ ರಗ್ಗುಗಳನ್ನು ವಿತರಿಸಿದರು, ಪೂಜ್ಯರು ರೋಟರಿ ಸಂಸ್ಥೆಯ ಸೇವಾಕಾರ್ಯವನ್ನು ಈ ಸಂದರ್ಭದಲ್ಲಿ ಶ್ಲಾಘಿಸಿದರು.

### *ಸ್ವಚ್ಛತಾ ಕಾರ್ಯಕ್ರಮ*

ತುಮಕೂರಿನ ಶ್ರೀ ಸಿದ್ಧಗಂಗಾ ಮಹಿಳಾ ಪದವಿ ಕಾಲೇಜಿನ ಎನ್.ಎಸ್.ಎಸ್. ಘಟಕದ ವತಿಯಿಂದ ದಿನಾಂಕ ೨೧-೧೨-೨೦೦೪ ರಿಮದ ೩೦-೧೨-೦೪ರವರೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಮತ್ತು ಸುತ್ತುಮುತ್ತ ಗ್ರಾಮಗಳಲ್ಲಿ ಸ್ವಚ್ಛತಾ ಕಾರ್ಯವನ್ನು ಕೈಗೊಂಡರು.

### *ಶ್ರೀಮಠದ ದಾಸೋಹ ಮಣೆಹ*

ಶ್ರೀ ಸಿದ್ಧಗಂಗಾ ಮಠ ದಾಸೋಹ ಪರಂಪರೆಗೆ ಹೆಸರಾದುದು ಈ ಪರಂಪರೆಗೆ ತನ್ನದೇ ಆದ ಸುದೀರ್ಘ ಇತಿಹಾಸವಿದೆ. ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯ ನೇತೃತ್ವದಲ್ಲಿ ಪ್ರತಿನಿತ್ಯ ಎಂಟು ಸಾವಿರ ವಿದ್ಯಾರ್ಥಿಗಳಲ್ಲದೆ ಶ್ರೀಮಠಕ್ಕೆ ಬಂದುಹೋಗುವ ಸಾವಿರಾರು ಯಾತ್ರಾರ್ಥಿಗಳಿಗೆ ದಾಸೋಹ ನಿರಂತರವಾಗಿ ನಡೆಯುತ್ತಾ ಬಂದಿದೆ. ಸಂಸ್ಥೆಯ ದಾಸೋಹ ಮಣೆಹ ಅವಿಚ್ಛಿನ್ನವಾಗಿ ನಡೆಯಲು ನಾಡಿನ ಉದಾರಿಗಳು ಸ್ವಪ್ರೇರಣೆಯಿಂದ ಆತ್ಮ ಸಂತೋಷಪೂರ್ವಕವಾಗಿ ಮುಂದೆ ಬರುತ್ತಿರುವುದು ಶ್ರೀಮಠದ ಪುಣ್ಯವಿಶೇಷವೆಂದೇ ಭಾವಿಸಬೇಕಾಗಿದೆ. ಈ ಪವಿತ್ರ ಸೇವಾ ಕಾರ್ಯದಲ್ಲಿ ಈಗಾಗಲೇ ಅನೇಕ ಉದಾರಿಗಳು ತಮ್ಮ ಧನ-ಧಾನ್ಯ ರೂಪದ ಭಕ್ತಿ ಕಾಣಿಕೆಯನ್ನು ಸಮರ್ಪಿಸುತ್ತಿದ್ದಾರೆ ಎಂಬುದನ್ನು ಆಸ್ತಿಕ ಮಹನೀಯರ ಗಮನಕ್ಕೆ ತರಲು ಇಚ್ಛಿಸುತ್ತಾ ಶ್ರೀಮಠದ ಈ ತ್ರಿಕಾಲಾಭಾದಿತ ಸೇವಾ ಕೈಂಕರ್ಯದಲ್ಲಿ ಸಹಕರಿಸಬೇಕೆಂದು "ಸಿದ್ಧಗಂಗಾ" ಮನವಿ ಮಾಡಿಕೊಳ್ಳುತ್ತದೆ.

ಶ್ರೀಮಠದ ದಾಸೋಹ ಮಣೆಹಕ್ಕೆ ಭಕ್ತಿ ಕಾಣಿಕೆ ಸಲ್ಲಿಸಿದ ಮಹನೀಯರ ಪಟ್ಟಿ, ಧನ, ಧಾನ್ಯ ರೂಪದಲ್ಲಿ :

ಬಳ್ಳಾರಿ ಜಿಲ್ಲೆ ಮತ್ತು ಸಿರಗುಪ್ಪ ತಾಲ್ಲೂಕಿನಲ್ಲಿ ಶ್ರೀಮಠಕ್ಕೆ ಧವಸವನ್ನು ನೀಡಿ ಸಹಕರಿಸಿದ ಪುಣ್ಯ ಗ್ರಾಮಗಳು ಮತ್ತು ಶ್ರೀಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಗ್ರಾಮಸ್ಥರು.

ಕೊಂಚಿಗೇರಿ, ದಾಸಾಪುರ, ಬೈಲೂರು, ಸಿಂಧಿಗೇರಿ, ಭೈರಾಪುರ, ಹಳೇಕೋಟೆ, ಶ್ಯಾನ್‌ವಾಸಪುರ, ಉಪ್ಪಾರ ಹೊಸಳ್ಳಿ, ಕೊಪ್ಪನಾಳು, ಅರಳಿಗನೂರು, ಚಾಣಕನೂರು, ರಾರಾವಿ, ಬಂಡ್ರಾಳು, ಬೊಮ್ಮನಾಳು, ಶಾಲಿಗನೂರು, ಬಗ್ನೂರು, ಗೋನಾಳು, ಭೈರದೇವನಹಳ್ಳಿ, ವಣೆನೂರು, ಕಲ್ಲುಕುಟಿಕಗನಹಾಳು, ಗೋಟೂರು, ಕರ್ಚೇಡು, ಕರೂರು, ಚಾನಾಳು, ತಾಳೂರು, ಆಗಲೂರು ಹೊಸಹಳ್ಳಿ, ಬಾಗೇವಾಡಿ, ಶ್ರೀಧರಗಡ್ಡೆ, ಕುರುಗೋಡು, ಸಿದ್ಧಮ್ಮನಹಳ್ಳಿ, ಎರೆಯಂಗಳಿ, ಶಂಕರಬಂತೆ, ಬಾದನಹಟ್ಟಿ, ಮಸೀದಿಪುರ, ಹಂಚಿಕೊಪ್ಪ, ಸಿರಗುಪ್ಪ ಪಟ್ಟಣರೈಸ್‌ಮಿಲ್‌ಗಳು ೬೦೦ ನೂರು ಮೂಟೆ, ಭತ್ತ, ೩೫ ಮೂಟೆ ಅಕ್ಕಿಯನ್ನು ಸಂಗ್ರಹಿಸಿ ಶ್ರೀಮಠಕ್ಕೆ ಅರ್ಪಿಸಲಾಗಿದೆ.

ದಿನಾಂಕ ೧೯-೧-೨೦೦೪ರ ಶ್ರೀ ಮಠದ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿಗಳ ಸಂಘದ ಮಹಾಧಿವೇಷನದಲ್ಲಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳಾದ ಶ್ರೀ ವಿಜಯಕುಮಾರ್ ಮತ್ತು ಶ್ರೀ ಎಸ್.ಪಿ. ರುದ್ರಪ್ಪನವರು ಬಡಮಕ್ಕಳಿಗಾಗಿ ೨೦೦ ಸ್ಟೀಲ್ ತಟ್ಟೆಗಳನ್ನು ಪೂಜ್ಯ ಶ್ರೀ ಶ್ರೀಗಳವರಿಗೆ ಅರ್ಪಿಸಿದರು.

ವರದಿ : ಡಿ.ಎಸ್. ನಾಗರಾಜು

★

### ಶ್ರೀವಾಣಿ

ಪ್ರಜಾಪ್ರಭುತ್ವದಲ್ಲಿನ ನಾಯಕ ವರ್ಗವು ಪ್ರಾಮಾಣಿಕರಾಗಿಯೂ ಪರಿಪೂರ್ಣತೆಯುಳ್ಳವ ರಾಗಿಯೂ; ಸೂಕ್ಷ್ಮ ಗ್ರಾಹಕಶಕ್ತಿಯುಳ್ಳವರಾಗಿಯೂ, ಸೇವಾಮನೋಭಾವವುಳ್ಳವರಾಗಿಯೂ, ದೀನದಲಿತ ವರ್ಗದಲ್ಲಿ ಅನುಕಂಪ ಉಳ್ಳವರಾಗಿಯೂ ಇದ್ದು ಸತ್ಯಶುದ್ಧ ನಿಷ್ಠೆ ತತ್ವಗಳಿಗೆ ತಮಗೆ ತಾವೇ ಸಮರ್ಪಿಸಿ ಕೊಂಡವರಾಗಿರಬೇಕು. ಇವೆಲ್ಲಕ್ಕೆ ಮಿಗಿಲಾಗಿ ಮಾನವೀಯ ಅನುಕಂಪ, ಮನುಷ್ಯ ಸಹಜವಾದ ಗುಣಗಳನ್ನು ಅಳವಡಿಸಿಕೊಂಡಿರಬೇಕು. ಇಂತಹ ಸರ್ವೋತ್ತಮ ವಿವೇಕ ಪೂರ್ಣ ವ್ಯಕ್ತಿಗಳ ಆಳ್ವಿಕೆಯನ್ನು ದೇಶಕ್ಕೆ ದೊರಕಿಸಿ ಕೊಡುವುದು ವಿದ್ಯಾವಂತ ವರ್ಗದ ಆದ್ಯಕರ್ತವ್ಯವಾಗಿದೆ.





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೬೩೧. | ಶ್ರೀ ಶಿವಾನಂದಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೩೨. | ಶ್ರೀ ವಿ. ಚನ್ನವೀರಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೩೩. | ಶ್ರೀ ಬಸವರಾಜಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೬೩೧ ರಿಂದ ೧೫೩೩ರ ವರೆಗಿನ ವಿಳಾಸ<br>ಶ್ರೀ ಗಣೇಶ ಗ್ರಾ.ಸಂ.ಪ.ಪೂ. ವಿದ್ಯಾಲಯ,<br>ಗೂಳೂರು, ತುಮಕೂರು ತಾಲ್ಲೂಕು. | |
| ೧೬೩೪. | ಶ್ರೀ ಹೆಚ್.ಎಲ್. ಶಿವರಾಜು<br>ದೈಹಿಕ ಶಿಕ್ಷಕರು | ೨,೦೦೦.೦೦ |
| ೧೬೩೫. | ಶ್ರೀಮತಿ ಕೆ.ಎಸ್. ಮಮತಾ<br>ಪ್ರ.ಶಾ.ಸ. | ೨,೦೦೦.೦೦ |
| | ಕ್ರ.ಸಂ. ೧೬೩೪ ರಿಂದ ೧೬೩೫ರ ವರೆಗಿನ ವಿಳಾಸ<br>ಶ್ರೀ ಮಂಜುನಾಥ ಬಾಲಕಿಯರ ಪ್ರೌಢಶಾಲೆ, ನೆಲಮಂಗಲ. | |
| ೧೫೩೬. | ಶ್ರೀ ಪುಟ್ಟಸ್ವಾಮಿ ಮತ್ತು ಕುಟುಂಬ<br>(ಬಾಸೂರು) ನಂ. ೨೨೧, ೫ನೇ ಕ್ರಾಸ್,<br>೧ನೇ ಮುಖ್ಯರಸ್ತೆ, ೧ನೇ ಹಂತ,<br>ಕೆ.ಹೆಚ್.ಬಿ. ಕಾಲೋನಿ, ಬಸವೇಶ್ವರನಗರ,<br>ಬೆಂಗಳೂರು – ೭೯. | ೨,೦೦೧.೦೦ |
| ೧೬೩೭. | ಶ್ರೀಮತಿ ಪುಷ್ಪಾವತಿ ಪರಮಶಿವಪ್ಪ<br>ಕಾಫಿ ಬೆಳೆಗಾರರು,<br>ರೇಣುಕಾ ಎಸ್ಟೇಟ್,<br>ಅಂಕಿಹಳ್ಳಿ ಮತ್ತು ಅಂಚೆ,<br>ಬೇಲೂರು ತಾ, ಹಾಸನ ಜಿಲ್ಲೆ. | ೨,೦೦೦.೦೦ |
| ೧೬೩೮. | ಶ್ರೀ ಪಿ.ಎಂ. ಬಸಪ್ಪ<br>ಪುಲುಗಾನಹಳ್ಳಿ, ಅಲ್ಲಿಪುರ ಅಂಚೆ,<br>ಗೌರಿಬಿದನೂರು ತಾ.<br>(ಪಿ.ಬಿ. ನಂಜೇಶ್‌ರವರ ಜ್ಞಾಪಕಾರ್ಥ) | ೨,೦೦೧.೦೦ |
| ೧೬೩೯. | ಶ್ರೀ ಸಿ.ಎನ್. ಕೃಷ್ಣಮೂರ್ತಿ<br>ಲಕ್ಷ್ಮೀ ನರಸಿಂಹಸ್ವಾಮಿ ನಿಲಯ,<br>ನಂ. ೬೫೮, ೧ನೇ ಮುಖ್ಯರಸ್ತೆ,<br>ಪೀಣ್ಯ ೧ನೇ ಹಂತ, ೨ನೇ ಬ್ಲಾಕ್,<br>ಬೆಂಗಳೂರು – ೫೮. | ೫,೦೦೦.೦೦ |
| ೧೬೪೦. | ಶ್ರೀ ಆರ್.ಎಸ್. ಗೌರಿಶಂಕರಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ,<br>ಹಾಲನೂರು, ತುಮಕೂರು ತಾ. | ೨,೦೦೧.೦೦ |
| ೧೬೪೧. | ಶ್ರೀ ಎಸ್.ಡಿ. ರೇಣುಕಾ ಪ್ರಸಾದ<br>ಮುಖ್ಯ ಶಿಕ್ಷಕರು,<br>ಶ್ರೀ ಮಲ್ಲೇಶ್ವರಂ ಸಂಸ್ಕೃತ ಪಾಠಶಾಲೆ,<br>ಕೋರಾ, ತುಮಕೂರು ತಾ. | ೧,೦೦೦.೦೦ |
| ೧೬೪೨. | ಶ್ರೀ ಬಿ.ಜಿ. ರಾಮಚಂದ್ರ,<br>ದೈಹಿಕ ಶಿಕ್ಷಕರು,<br>ಆದಿವಾಲ, ಹಿರಿಯೂರು ತಾ. | ೨,೦೦೧.೦೦ |
| ೧೬೪೩. | ಶ್ರೀ ಡಿ.ಎಸ್. ಕೃಷ್ಣಮೂರ್ತಿ<br>ಪ್ರ.ಶಾ.ಸ. | ೧,೦೦೦.೦೦ |
| ೧೬೪೪. | ಶ್ರೀ ಜಿ. ರಂಗಪ್ಪ<br>ಸೇವಕರು | ೧,೦೦೦.೦೦ |
| | ಕ್ರ.ಸಂ. ೧೬೪೩ ರಿಂದ ೧೬೪೪ರ ವರೆಗಿನ ವಿಳಾಸ<br>ಶ್ರೀ ಸಿ. ಗ್ರಾ. ಪ್ರೌಢಶಾಲೆ, ಗಂಜಲಗುಂಟೆ. | |
| ೧೬೪೫. | ಶ್ರೀ ಆರ್.ಕೆ. ಮಲ್ಲಶೆಟ್ಟಿ<br>ಸೇವಕರು,<br>ಶ್ರೀ ಬಸವೇಶ್ವರ ಪ್ರೌ.ಶಾಲೆ,<br>ಸೋಲೂರು, ಮಾಗಡಿ ತಾ. | ೨,೦೦೦.೦೦ |
| ೧೬೪೬. | ಶ್ರೀ ಎಂ.ಎನ್. ನಂಜುಂಡಾರಾಧ್ಯ<br>ನಂ. ೩೫೬, ೩ನೇ ಡಿವಿಜನ್, ಡಿ.ವಿ.ಟಿ. ಪೇಟೆ,<br>ಚಿಕ್ಕಬಳ್ಳಾಪುರ ತಾಲ್ಲೂಕು,<br>ಕೋಲಾರ ಜಿಲ್ಲೆ. | ೨,೦೫೦.೦೦ |
| ೧೬೪೭. | ಶ್ರೀ ಬಿ. ಶಿವಪ್ರಕಾಶ್<br>ದ್ವಿ.ದ.ಸ.<br>ಶ್ರೀ ಶಿವಕುಮಾರಸ್ವಾಮಿ ಗ್ರಾ.ಪ್ರೌ.ಶಾಲೆ,<br>ಬ್ಯಾಲಕೆರೆ, ಮಾಗಡಿ ತಾ. | ೨,೦೦೦.೦೦ |
| ೧೬೪೮. | ಶ್ರೀ ಎಸ್.ಆರ್. ವಾಸುದೇವ ರೆಡ್ಡಿ<br>ಸಾಕಲವಾರ, ಬನ್ನೇರುಘಟ್ಟ ರಸ್ತೆ,<br>ಬೆಂಗಳೂರು – ೮೩. | ೩,೫೦೧.೦೦ |
| ೧೬೪೯. | ಶ್ರೀ ಶಿವಯೋಗಿ ಸಿದ್ಧರಾಮ ಮಹಾಸ್ವಾಮಿಗಳು<br>ಶ್ರೀ ಬೆಳಗುಂಬ ಕ್ಷೇತ್ರ,<br>ತುಮಕೂರು ಕಸಬಾ | ೧,೦೦೧.೦೦<br>(೧ನೇ ಕಂತು) |
| ೧೬೫೦. | ಶ್ರೀ ಜಿ. ಚಂದ್ರಶೇಖರಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿ. ಗ್ರಾ. ಸಂ. ಪಾ.<br>ಬ್ಯಾಲಕೆರೆ, ಮಾಗಡಿ ತಾ. | ೨,೦೦೧.೦೦ |
| ೧೬೫೧. | ಶ್ರೀ ಕೆ.ಆರ್. ನಾಗರಾಜು<br>ಸೇವಕರು,<br>ಶ್ರೀ ಸಿ.ಗ್ರಾ. ಪ್ರೌ.ಶಾಲೆ,<br>ಕಲ್ಲೂರು, ಗುಬ್ಬಿ ತಾಲ್ಲೂಕು. | ೨,೦೦೦.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೬೫೨. | ಶ್ರೀ ಹೆಚ್. ಮುನಿರಾಜು ಬಿನ್ ಹನುಮಯ್ಯ<br>ಗೋವಿಂದಪುರ, ಹೆಗ್ಗುಂದ ಅಂಚೆ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾ. ಜಿಲ್ಲೆ. | ೨೦,೦೦೦.೦೦ |
| ೧೬೫೩. | ಶ್ರೀಮತಿ ಕೆ.ಆರ್. ಹೇಮಲತಾ<br>ಬಿನ್ ರಾಮಚಂದ್ರ<br>ಕ್ಯಾತ್ಸಂದ್ರ, ತುಮಕೂರು ತಾ. | ೧,೦೦,೦೦೦.೦೦ |
| ೧೬೫೪. | ಶ್ರೀಮತಿ ಬಿ. ವಿಜಯಲಕ್ಷ್ಮಿ ಬಿನ್<br>ಬೆಟ್ಟತಿಮ್ಮಯ್ಯ<br>ಕಡಬ, ಗುಬ್ಬಿ ತಾಲ್ಲೂಕು. | ೫೦,೦೦೦.೦೦ |
| ೧೬೫೫. | ಶ್ರೀ ಟಿ.ಯು. ಜಯಣ್ಣ ಬಿನ್ ತಾಕಪ್ಪ<br>ಹರಗಿ, ಶಿಕಾರಿಪುರ ತಾ. | ೧೦,೦೦೦.೦೦ |
| ೧೬೫೬. | ಶ್ರೀ ವಿ.ಜಿ. ರಮೇಶ ಬಿನ್ ಜವರನಾಯಕ<br>ಬ್ರಹ್ಮ ವಿದ್ಯಾ ಸಮಾಜ ಕಾಂಪೌಂಡ್,<br>ಚಿಕ್ಕನಾಯಕನಹಳ್ಳಿ, (ಟಿ.ಬಿ. ಎದುರು),<br>ತುಮಕೂರು ಜಿಲ್ಲೆ. | ೧,೨೦,೦೦೦.೦೦ |
| ೧೬೫೭. | ಶ್ರೀ ಹನುಮಯ್ಯ<br>ಗೋವಿಂದಪುರ, ಹೆಗ್ಗುಂದ ಅಂಚೆ,<br>ನೆಲಮಂಗಲ ತಾ. | ೪೦,೦೦೦.೦೦ |
| ೧೬೫೮. | ಶ್ರೀ ಕೆ.ಜಿ. ಬೇಟೆ ತಿಮ್ಮಯ್ಯ<br>ಕಡಬ, ಗುಬ್ಬಿ ತಾ. | ೫೦,೦೦೦.೦೦ |
| ೧೬೫೯. | ಶ್ರೀ ಹೆಚ್.ಪಿ. ಮಾರುತಿ ಬಿನ್<br>ಪುಟ್ಟಹನುಮಯ್ಯ<br>ಊರ್ಡಿಗೆರೆ, ತುಮಕೂರು ತಾ. | ೧,೦೦,೦೦೦.೦೦ |
| ೧೬೬೦. | ಶ್ರೀ ಮಧುಸೂದನ ಬಿನ್ ಹನುಮಯ್ಯ<br>ವಿನೋಬನಗರ, ತುರುವೇಕೆರೆ,<br>ತುಮಕೂರು ಜಿಲ್ಲೆ. | ೧೦,೦೦೦.೦೦ |
| ೧೬೬೧. | ಶ್ರೀ ಪಿ. ಚಂದ್ರಶೇಖರಯ್ಯ ಬಿನ್<br>ಶ್ರೀ ಪಿ. ಈರಪ್ಪ,ಕೇರಾಫ್ ರಾಮಕೃಷ್ಣ<br>೨ನೇ ಎ ಮುಖ್ಯರಸ್ತೆ, ನಾಗರಭಾವಿ,<br>೨ನೇ ಹಂತ, ಬೆಂಗಳೂರು-೭೨. | ೨,೦೦,೦೦೦.೦೦ |
| ೧೬೬೨. | ಶ್ರೀ ಹೆಚ್. ಮುನಿರಾಜು<br>ಬಿನ್ ಹನುಮಯ್ಯ,<br>ಗೋವಿಂದಪುರ, ಹೆಗ್ಗುಂದ ಅಂಚೆ,<br>ನೆಲಮಂಗಲ ತಾ. | ೪೦,೦೦೦.೦೦ |
| ೧೬೬೩. | ಶ್ರೀ ರಮೇಶ ವಿ.ಜಿ. ಬಿನ್<br>ಜವರನಾಯಕ,<br>ಚಿಕ್ಕನಾಯಕನಹಳ್ಳಿ, ಟಿ.ಬಿ. ಎದುರು,<br>ತುಮಕೂರು ಜಿಲ್ಲೆ. | ೬೦,೦೦೦.೦೦ |
| ೧೬೬೪. | ಶ್ರೀ ಕೆ. ಮಲ್ಲೇಗೌಡ<br>ಪ್ರ.ಶಾ.ಸ. | ೧,೦೦೦.೦೦ |
| ೧೬೬೫. | ಶ್ರೀ ಕೆ. ಪುಟ್ಟಾಂಜನೇಯ<br>ಸೇವಕರು | ೧,೦೦೦.೦೦ |
| ೧೬೬೬. | ಶ್ರೀ ಎಸ್.ಎ. ಕಾಳಯ್ಯ<br>ಸೇವಕರು | ೧,೦೦೦.೦೦ |
| | ಕ್ರ.ಸಂ. ೧೬೬೪ ರಿಂದ ೧೬೬೬ರ ವರೆಗಿನ ವಿಳಾಸ<br>ಶ್ರೀ ನಿವೇದಿತಾ ಪ್ರೌಢಶಾಲೆ, ಕ್ಯಾತ್ಸಂದ್ರ, ತುಮಕೂರು ತಾ. | |
| ೧೬೬೭. | ಶ್ರೀ ಕೆ.ಎಚ್. ಶಿವರುದ್ರಯ್ಯ<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೧೬೬೮. | ಶ್ರೀ ಕೆ. ಗಂಗನರಸಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೬೯. | ಶ್ರೀ ಕೆ. ಹೆಚ್. ಮಹಾಂತೇಶಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೦. | ಶ್ರೀ ಡಿ.ಬಿ. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೧. | ಶ್ರೀ ಕೆ. ಸಿದ್ಧಲಿಂಗಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೨. | ಶ್ರೀ ಗಂಗನರಸಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೩. | ಶ್ರೀ ಡಿ.ಹೆಚ್. ಗಂಗಾಧರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೪. | ಶ್ರೀ ಎಸ್. ನಟರಾಜು<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೫. | ಶ್ರೀ ಜಿ. ಶಿವಣ್ಣ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೬. | ಶ್ರೀ ಗಂಗಾಧರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೭. | ಶ್ರೀ ಪಿ.ಆರ್. ಸೋಮಶೇಖರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೮. | ಶ್ರೀ ಗಂಗಾಧರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೭೯. | ಶ್ರೀ ವಿ. ಶ್ರೀನಿವಾಸಮೂರ್ತಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೮೦. | ಶ್ರೀ ಜಿ. ಕುಮಾರಸ್ವಾಮಿ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೮೧. | ಶ್ರೀ ಎಂ.ಬಿ. ಸಂಧ್ಯಾ<br>ಸಹ ಶಿಕ್ಷಕರು | ೨,೦೦೧.೦೦ |
| ೧೬೮೨. | ಶ್ರೀ ಸೋಮಶೇಖರಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೧೬೬೭ ರಿಂದ ೧೬೮೨ರ ವರೆಗಿನ ವಿಳಾಸ<br>ಶ್ರೀ ಸಿ.ಸ. ಪ್ರೌ.ಶಾಲೆ, ಶ್ರೀ ಸಿದ್ಧಗಂಗಾ ಮಠ. | |

*(ಮುಂದುವರೆಯುತ್ತದೆ)*





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೬೦. | ಡಾ. ಡಿ.ಎನ್. ಯೋಗೇಶ್ವರಪ್ಪ<br>ಉಪನ್ಯಾಸಕರು | ೧,೦೦೨.೦೦ |
| ೧೨೬೧. | ಡಾ. ಎಂ.ಎಸ್. ಶಿವಪ್ರಕಾಶ್<br>ಉಪನ್ಯಾಸಕರು | ೧,೦೦೨.೦೦ |
| ೧೨೬೨. | ಶ್ರೀ ಸಿ. ನಾಗರಾಜು<br>ಉಪನ್ಯಾಸಕರು | ೧,೦೦೨.೦೦ |
| ೧೨೬೩. | ಡಾ. ಮೋಹನ್‌ಕುಮಾರ್<br>ಉಪನ್ಯಾಸಕರು | ೧,೦೦೨.೦೦ |
| ೧೨೬೪. | ಶ್ರೀ ಹೆಚ್.ಪಿ. ವೀರಭದ್ರಸ್ವಾಮಿ<br>ಉಪನ್ಯಾಸಕರು | ೧,೦೦೨.೦೦ |
| ೧೨೬೫. | ಶ್ರೀಮತಿ ಹೆಚ್.ಎಸ್. ಸಿದ್ಧಗಂಗಮ್ಮ<br>ಉಪನ್ಯಾಸಕರು | ೧,೦೦೦.೦೦ |
| ೧೨೬೬. | ಡಾ. ಆರ್. ಸುನಂದಕುಮಾರಿ<br>ಉಪನ್ಯಾಸಕರು | ೧,೦೦೨.೦೦ |
| ೧೨೬೭. | ಶ್ರೀ ಎಸ್.ಬಿ. ಶಶಿಧರಯ್ಯ<br>ಉಪನ್ಯಾಸಕರು | ೧,೦೦೨.೦೦ |
| ೧೨೬೮. | ಶ್ರೀ ಕೆ.ಬಿ. ಮಂಜುನಾಥ ಪ್ರಸಾದ್<br>ಉಪನ್ಯಾಸಕರು | ೧,೦೦೨.೦೦ |
| ೧೨೬೯. | ಶ್ರೀ ಪಿ. ಚನ್ನಬಸಪ್ಪ<br>ಉಪನ್ಯಾಸಕರು | ೧,೦೦೨.೦೦ |
| ೧೨೭೦. | ಶ್ರೀ ವೈ.ಎ. ಶರಣಬಸಪ್ಪ<br>ಉಪನ್ಯಾಸಕರು | ೧,೦೦೦.೦೦ |
| ೧೨೭೧. | ಶ್ರೀ ಪಿ.ಆರ್. ಪೀರ್‌ಸಾಬ್ ಗಾಲ್<br>ಉಪನ್ಯಾಸಕರು | ೧,೦೦೨.೦೦ |
| ೧೨೭೨. | ಶ್ರೀ ಬಿ.ಎಸ್. ಮಲ್ಲೇಶಪ್ಪ<br>ಉಪನ್ಯಾಸಕರು | ೧,೦೦೨.೦೦ |
| ೧೨೭೩. | ಶ್ರೀ ಕೆ.ಸಿ. ಜಯಸ್ವಾಮಿ<br>ಉಪನ್ಯಾಸಕರು | ೧,೦೦೨.೦೦ |
| ೧೨೭೪. | ಶ್ರೀ ಹೆಚ್.ಜಿ. ಸದಾಶಿವಯ್ಯ<br>ಉಪನ್ಯಾಸಕರು | ೧,೦೦೨.೦೦ |
| ೧೨೭೫. | ಶ್ರೀ ಎಸ್.ಎಲ್. ಕಾಡದೇವರ ಮಠ<br>ಉಪನ್ಯಾಸಕರು | ೧,೦೦೨.೦೦ |
| ೧೨೭೬. | ಶ್ರೀ ಪರಶಿವಮೂರ್ತಿ<br>ಉಪನ್ಯಾಸಕರು | ೧,೦೦೨.೦೦ |
| ೧೨೭೭. | ಶ್ರೀ ಟಿ.ಎಸ್. ಸಚ್ಚಿದಾನಂದಮೂರ್ತಿ<br>ಉಪನ್ಯಾಸಕರು | ೧,೦೦೨.೦೦ |
| ೧೨೭೮. | ಶ್ರೀ ಕೆ.ಆರ್. ಮಾದವ<br>ಉಪನ್ಯಾಸಕರು | ೧,೦೦೨.೦೦ |
| ೧೨೭೯. | ಶ್ರೀ ಬಿ.ಎಂ. ಕಂಠಪ್ಪ<br>ಉಪನ್ಯಾಸಕರು | ೧,೦೦೨.೦೦ |
| ೧೨೮೦. | ಶ್ರೀ ಸಿ.ಆರ್. ಜಯಕುಮಾರ್<br>ಉಪನ್ಯಾಸಕರು | ೧,೦೦೧.೦೦ |
| ೧೨೮೧. | ಡಾ. ಹೆಚ್.ಎಸ್. ನಿರಂಜನಾರಾಧ್ಯ<br>ಉಪನ್ಯಾಸಕರು | ೧,೦೦೦.೦೦ |
| ೧೨೮೨. | ಶ್ರೀ ಮಹಮದ್ ರಹಮತ್ ಉಲ್ಲಾಹಕ್<br>ಉಪನ್ಯಾಸಕರು | ೧,೦೦೨.೦೦ |
| ೧೨೮೩. | ಶ್ರೀ ಎನ್. ಶಿವರುದ್ರಯ್ಯ<br>ಉಪನ್ಯಾಸಕರು | ೧,೦೦೨.೦೦ |
| ೧೨೮೪. | ಶ್ರೀ ಎಸ್. ರಾಜಶೇಖರಯ್ಯ<br>ಉಪನ್ಯಾಸಕರು | ೧,೦೦೧.೦೦ |
| ೧೨೮೫. | ಶ್ರೀ ಜಿ.ಎಸ್. ರೇಣುಕಪ್ಪ<br>ಪ್ರಾಂಶುಪಾಲರು | ೧,೦೦೦.೦೦ |
| ೧೨೮೬. | ಶ್ರೀಮತಿ ದಾಕ್ಷಾಯಣಮ್ಮ<br>ಉಪನ್ಯಾಸಕರು | ೧,೦೦೦.೦೦ |
| ೧೨೮೭. | ಶ್ರೀ ಜಿ.ಸಿ. ಮಲ್ಲಿಕಾರ್ಜುನ<br>ಉಪನ್ಯಾಸಕರು | ೧,೦೦೦.೦೦ |
| ೧೨೮೮. | ಶ್ರೀ ಹೆಚ್.ಎಸ್. ಮಲ್ಲಿಕಾರ್ಜುನಪ್ಪ<br>ಉಪನ್ಯಾಸಕರು | ೧,೦೦೦.೦೦ |
| ೧೨೮೯. | ಶ್ರೀ ಲಕ್ಷ್ಮೀನಾರಾಯಣ<br>ಉಪನ್ಯಾಸಕರು | ೧,೦೦೦.೦೦ |
| ೧೨೯೦. | ಶ್ರೀಮತಿ ವಿಜಯಕುಮಾರಿ<br>ಉಪನ್ಯಾಸಕರು | ೧,೦೦೦.೦೦ |
| ೧೨೯೧. | ಶ್ರೀಮತಿ ಎಲ್. ಗಿರಿಜಾ<br>ಉಪನ್ಯಾಸಕರು | ೧,೦೦೦.೦೦ |
| ೧೨೯೨. | ಶ್ರೀ ಜಯಶಂಕರ್<br>ಉಪನ್ಯಾಸಕರು | ೧,೦೦೦.೦೦ |
| ೧೨೯೩. | ಶ್ರೀಮತಿ ಕೆ.ಸಿ. ಮಂಗಳ<br>ಉಪನ್ಯಾಸಕರು | ೧,೦೦೦.೦೦ |
| ೧೨೯೪. | ಶ್ರೀ ಹೆಚ್.ಎಂ. ದಕ್ಷಿಣಾಮೂರ್ತಿ<br>ಉಪನ್ಯಾಸಕರು | ೧,೦೦೧.೦೦ |
| ೧೨೯೫. | ಶ್ರೀಮತಿ ಜಗದಾ<br>ಉಪನ್ಯಾಸಕರು | ೧,೦೦೦.೦೦ |
| ೧೨೯೬. | ಶ್ರೀ ಬಿ.ಜಿ. ಗಂಗಣ್ಣ<br>ಅಧೀಕ್ಷಕರು | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೨೯೭. | ಶ್ರೀ ರೇಣುಕಪ್ರಸಾದ್<br>ಪ್ರ.ದ.ಸ. | ೧,೦೦೦.೦೦ |
| ೧೨೯೮. | ಶ್ರೀ ಹೆಚ್.ಎಸ್. ರೇಣುಕಯ್ಯ<br>ಪ್ರ.ದ.ಸ. | ೧,೦೦೧.೦೦ |
| ೧೨೯೯. | ಶ್ರೀ ಹೆಚ್.ಸಿ. ಜಯಣ್ಣ<br>ದ್ವಿ.ದ.ಸ. | ೧,೦೦೦.೦೦ |
| ೧೩೦೦. | ಶ್ರೀ ಬಿ. ಚಂದ್ರಪ್ಪ<br>ದ್ವಿ.ದ.ಸ. | ೧,೦೦೦.೦೦ |
| ೧೩೦೧. | ಶ್ರೀಮತಿ ಎಲ್.ಎಸ್. ಸುವರ್ಣಮ್ಮ<br>ದ್ವಿ.ದ.ಸ. | ೧,೦೦೦.೦೦ |
| ೧೩೦೨. | ಶ್ರೀ ಎಂ.ಪಿ. ನರೇಂದ್ರ ಬಾಬು<br>ದಿ.ದ.ಸ. | ೧,೦೦೦.೦೦ |
| ೧೩೦೩. | ಶ್ರೀಮತಿ ಸಿ. ಪ್ರೇಮ<br>ಸಿ.ಸಿ.ಟಿ. | ೧,೦೦೦.೦೦ |
| ೧೩೦೪. | ಶ್ರೀ ಎ.ಎಸ್. ವಿರೂಪಾಕ್ಷಯ್ಯ<br>ಪ್ರ.ಶಾ.ಸ. | ೧,೦೦೦.೦೦ |
| ೧೩೦೫. | ಶ್ರೀ ಬಿ.ಎಂ. ಬಸವಣ್ಣ<br>ಪ್ರ.ಶಾ.ಸ. | ೧,೦೦೦.೦೦ |
| ೧೩೦೬. | ಶ್ರೀ ಎಂ. ಜಯಶಂಕರ್<br>ಸಹಾಯಕ | ೧,೦೦೦.೦೦ |
| ೧೩೦೭. | ಶ್ರೀ ಬಿ.ಎಸ್. ಗುರುಬಸವದೇವರು<br>'ಡಿ' ಗ್ರೂಫ್ ನೌಕರ | ೧,೦೦೦.೦೦ |
| ೧೩೦೮. | ಶ್ರೀ ಎಸ್. ಸಿದ್ಧರಾಮಯ್ಯ<br>'ಡಿ' ಗ್ರೂಫ್ ನೌಕರ | ೧,೦೦೦.೦೦ |
| ೧೩೦೯. | ಶ್ರೀಮತಿ ಸಿ. ಸಿದ್ಧಮ್ಮ<br>ಸೇವಕರು | ೧,೦೦೦.೦೦ |
| ೧೩೧೦. | ಶ್ರೀ ಬಿ.ಎಸ್. ಪರಮೇಶ್ವರಪ್ಪ<br>ಪ್ರದ.ಸ. | ೧,೦೦೦.೦೦ |
| ೧೩೧೧. | ಶ್ರೀ ಬಿ.ಎಂ. ಚಂದ್ರಶೇಖರಯ್ಯ<br>ದ್ವಿ.ದ.ಸ. | ೧,೦೦೦.೦೦ |
| ೧೩೧೨. | ಶ್ರೀ ಬಿ.ಸಿ. ಪರಮೇಶ್ವರಯ್ಯ<br>ಸೇವಕರು | ೧,೦೦೦.೦೦ |
| | ಕ್ರ.ಸಂ. ೧೨೬೦ ರಿಂದ ೧೩೧೨ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಮಹಿಳಾ ಕಾಲೇಜು,<br>ತುಮಕೂರು – ೨. | |
| ೧೩೧೩. | ಶ್ರೀ ವಿ.ಎನ್. ಮುದ್ದವೀರಯ್ಯ<br>ವೃತ್ತಿಶಿಕ್ಷಕರು,<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ತರೂರು, ಸಿರಾ ತಾಲ್ಲೂಕು. | ೧,೦೦೧.೦೦ |
| ೧೩೧೪. | ಶ್ರೀ ಎನ್.ಹೆಚ್. ರಾಮಕೃಷ್ಣ<br>ಪ್ರ.ದ.ಸ. | ೧,೦೦೦.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೧೩೧೫. | ಶ್ರೀ ಮುದ್ದಯ್ಯ<br>ದ್ವಿ.ದ.ಸ. | ೧,೦೦೦.೦೦ |
| ೧೩೧೬. | ಶ್ರೀಮತಿ ಪುಷ್ಪಮಾಲಿ<br>ದ್ವಿ.ದ.ಸ. | ೧,೦೦೧.೦೦ |
| ೧೩೧೭. | ಶ್ರೀ ಜಿ. ಬಾಳಗಂಗಯ್ಯ<br>ಗ್ರ.ಪ. | ೧,೦೦೦.೦೦ |
| ೧೩೧೮. | ಶ್ರೀ ಬಿ. ಷಡಕ್ಷರಯ್ಯ<br>ದ್ವಿ.ದ.ಸ. | ೧,೦೦೦.೦೦ |
| ೧೩೧೯. | ಶ್ರೀ ಬಸವರಾಜು<br>ದ್ವಿ.ದ.ಸ. | ೧,೦೦೦.೦೦ |
| ೧೩೨೦. | ಶ್ರೀ ಎಂ. ರಾಜಶೇಖರಮೂರ್ತಿ<br>ಅಡೆಂಡರ್ | ೧,೦೦೦.೦೦ |
| ೧೩೨೧. | ಶ್ರೀ ಬಿ. ಅಶೋಕ್‌ಕುಮಾರ್<br>ಸೇವಕರು | ೧,೦೦೦.೦೦ |
| ೧೩೨೨. | ಶ್ರೀ ಬಿ.ಸಿ. ಉಮೇಶ್<br>ಸೇವಕರು | ೧,೦೦೦.೦೦ |
| | ಕ್ರ.ಸಂ. ೧೩೧೪ ರಿಂದ ೧೩೨೨ರ ವಿಳಾಸಗಳು<br>ಶ್ರೀ ಸಿದ್ಧಗಂಗಾ ಪ್ರಥಮದರ್ಜೆ ಕಾಲೇಜು,<br>ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ. | |
| ೧೩೨೩. | ಶ್ರೀ ಐ.ಎಂ. ಶಿವಕುಮಾರ್<br>ಉಪನ್ಯಾಸಕರು,<br>ಶ್ರೀ ಸಿದ್ಧಗಂಗಾ ಪ್ರಥಮ ದರ್ಜೆ ಮಹಿಳಾ ಕಾಲೇಜು,<br>ತುಮಕೂರು – ೨. | ೧,೦೦೨.೦೦ |
| ೧೩೨೪. | ಶ್ರೀ ಕೆ.ಟಿ. ಶಿವಕುಮಾರಸ್ವಾಮಿ<br>ಸಹ ಶಿಕ್ಷಕರು,<br>ಶ್ರೀ ಬೆಳಧರ ಗ್ರಾ. ಪ್ರೌಢಶಾಲೆ, ಬೆಳಧರ,<br>ತುಮಕೂರು ತಾಲ್ಲೂಕು. | ೧,೦೦೧.೦೦ |
| ೧೩೨೫. | ಶ್ರೀ ಸೋಮಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಉದ್ಧಾನೇಶ್ವರ ಗ್ರಾ. ಪ್ರೌಢಶಾಲೆ,<br>ಗಟ್ಟೀಪುರ, ಮಾಗಡಿ ತಾಲ್ಲೂಕು. | ೧,೦೦೨.೦೦ |
| ೧೩೨೬. | ಶ್ರೀ ವಿ.ಎಸ್. ಮರಿದೇವರು<br>ಸಂಸ್ಕೃತ ಶಿಕ್ಷಕರು,<br>ಶ್ರೀ ಶಿವಕುಮಾರಸ್ವಾಮಿ. ಗ್ರಾ. ಪ್ರೌಢಶಾಲೆ,<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೧೩೨೭. | ಶ್ರೀಮತಿ ಬಿ. ವಿಜಯಲಕ್ಷ್ಮೀ<br>ಸಹ ಶಿಕ್ಷಕರು,<br>ಶ್ರೀ ಉದ್ಧಾನಶಿವಯೋಗೇಶ್ವರ ಗ್ರಾ. ಪ್ರೌ. ಶಾಲೆ,<br>ಗಟ್ಟೀಪುರ, ಮಾಗಡಿ ತಾಲ್ಲೂಕು. | ೧,೦೦೧.೦೦ |

*(ಮುಂದುವರೆಯುತ್ತದೆ)*



ಸಚಿವ ಶ್ರೀ ಸಿ. ಚನ್ನಿಗಪ್ಪ ಅವರು ಇತ್ತೀಚಿಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು



ಸಚಿವ ಶ್ರೀ ಬಿ. ಸತ್ಯನಾರಾಯಣ್ ಅವರು ಇತ್ತೀಚಿಗೆ ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶ್ರೀ ಶ್ರೀಗಳವರ ಆಶೀರ್ವಾದ ಪಡೆದರು



ತುಮಕೂರಿನಲ್ಲಿ ಜನವರಿ ೧೦ ರಂದು ನಡೆದ ರಾಜ್ಯ ಶಿಕ್ಷಕರ ಸಮಾವೇಶವನ್ನು ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಶಿಕ್ಷಣ ಸಚಿವ ಶ್ರೀ ರಾಮಲಿಂಗಾರೆಡ್ಡಿ ಅವರು ಉದ್ಘಾಟಿಸಿದರು. ಸಚಿವ ಶ್ರೀ ಬಸವರಾಜ ಹೊರಟ್ಟಿ ಮೊದಲಾದವರು ಉಪಸ್ಥಿರಿದ್ದರು.




ಡಿಸೆಂಬರ್ ೧೨ ರಂದು ಕೆಂಗೇರಿ ಉಪನಗರದಲ್ಲಿರುವ ಶ್ರೀ ಶ್ರೀಕಂಠೇಶ್ವರ ಬಡಾವಣೆಯಲ್ಲಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ವೃತ್ತವನ್ನು ಪರಮಪೂಜ್ಯರು ಉದ್ಘಾಟಿಸಿದರು. ಶ್ರೀಮಠದ ಹಳೇ ವಿದ್ಯಾರ್ಥಿ ಶ್ರೀ ಕೆ. ಬಸವಯ್ಯ ಹಾಗೂ ಸೂಲಿಕೆರೆ ಭಕ್ತವೃಂದದವರು ವ್ಯವಸ್ಥೆ ಮಾಡಿದ್ದರು.



ನೂತನ ಸಚಿವರಾದ ಶ್ರೀ ಅಮರೇಗೌಡ ಬಯ್ಯಾಪುರ ಮತ್ತು ಶ್ರೀ ಮಹದೇವ ಪ್ರಸಾದ್‌ರವರು ಭೇಟಿ ನೀಡಿ ಪ್ರಾರ್ಥನಾ ಸಭೆಯಲ್ಲಿ ಭಾಗವಹಿಸಿದ್ದರು.



ಗುಲ್ಬರ್ಗ ಜಿಲ್ಲೆ ಸುರಪರ ತಾಲ್ಲೂಕಿನ ಕೊಡೆಕಲ್ಲ ಗ್ರಾಮದಲ್ಲಿ ನಡೆದ ಲಕ್ಷ ದೀಪೋತ್ಸೋವವು ಸಿದ್ಧಗಂಗಾ ಮಠದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ನಡೆಯಿತು.

Printed at: Geetanjali Graphics #4, M.S.R. Indl Estate, Bangalore - 54. Ph: 23604087